ಕಾಯಕವೇ ಕೈಲಾಸ

# ಸಿದ್ಧಗಂಗಾ

ಸಂಪುಟ : ೪೬ ಮಾರ್ಚ್ ೨೦೧೦ ಸಂಚಿಕೆ : ೩



ತುಮಕೂರಿನಲ್ಲಿ ಇತ್ತೀಚೆಗೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು 'ದೇವಿಪ್ರಸಾದ್ ಕಂಫರ್ಟ್ಸ್' ಅನ್ನು ಜ್ಯೋತಿ ಬೆಳಗಿಸುವ ಮೂಲಕ ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಹಿರೇಮಠದ ಪೂಜ್ಯ ಡಾ. ಶ್ರೀ ಶ್ರೀ ಶಿವಾನಂದ ಶಿವಾಚಾರ್ಯ ಮಹಾಸ್ವಾಮಿಗಳು, ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್, ಶ್ರೀ ಟಿ.ಸಿ. ಓಹಿಲೇಶ್ವರ್, ಶ್ರೀ ಟಿ.ಎಂ. ಯೋಗೀಶ್ ಮತ್ತು ಟಿ.ವೈ. ಯಶಸ್ ರವರು ಉಪಸ್ಥಿತರಿದ್ದರು



ಗೌರಿಬಿದನೂರಿನ ವೀರಶೈವ ಸೇವಾ ಸಮಿತಿ ವತಿಯಿಂದ ನಿರ್ಮಿಸಲಾಗಿರುವ ವಿದ್ಯಾರ್ಥಿ ನಿಲಯದ ನೂತನ ಕಟ್ಟಡವನ್ನು ಪರಮಪೂಜ್ಯ ಶ್ರೀಗಳವರು ಲೋಕಾರ್ಪಣೆ ಮಾಡಿದರು



ತುಮಕೂರಿನಲ್ಲಿ ಶ್ರೀ ಬಸವೇಶ್ವರ ಪತ್ತಿನ ಸಹಕಾರ ಸಂಘದವರು ಹೊರತಂದ ದಿನದರ್ಶಿಕೆಯನ್ನು ಪರಮಪೂಜ್ಯ ಶ್ರೀಗಳವರು ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಅಟವೀ ಶಿವಲಿಂಗ ಮಹಾಸ್ವಾಮಿಗಳು ಹಾಗೂ ಗಣ್ಯರು ಉಪಸ್ಥಿತರಿದ್ದರು

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ


ಸಂಪುಟ : ೪೬ ಮಾರ್ಚ್ ೨೦೧೦ ಸಂಚಿಕೆ : ೩


## ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ದೀಪದ ಹೆಜ್ಜೆಗಳು

ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀಮಠದ ಸೇವಾವ್ರತಧಾರಿಗಳಾದುದು ದಿನಾಂಕ 03-03-1930. ಈ ಮಾರ್ಚ್ ತಿಂಗಳಿಗೆ ಎಂಬತ್ತು ವರ್ಷಗಳು ತುಂಬುತ್ತವೆ. ಕಳೆದ ಈ ಎಂಬತ್ತು ವರ್ಷಗಳುದ್ದಕ್ಕೂ ಪೂಜ್ಯರು 'ಯಾವಾಗಲೂ ಜಾಗರವಿದ್ದು ಸಸಿಯ ಸಲಹಿ'ದ್ದಾರೆ. ಕ್ಷಣಕ್ಷಣಾರ್ಧಗಳನ್ನೂ ಶ್ರೀಮಠಕ್ಕಾಗಿ ತನ್ಮೂಲಕ ಸಮಾಜಕ್ಕಾಗಿ, ಲೋಕಕಲ್ಯಾಣಕ್ಕಾಗಿ ವ್ಯಯಿಸಿದ್ದಾರೆ, ಹಾಗೆ ವ್ಯಯಿಸುವಾಗ ಶ್ರೀಗಳವರು ರೈತನಂತೆ ಹೊಲಗದ್ದೆಗಳಲ್ಲಿ ದುಡಿದಿದ್ದಾರೆ. ಮಠದ ಮಕ್ಕಳಿಗಾಗಿ, ಮಠಾರ್ಥಿಗಳಿಗಾಗಿ ಅಡಿಗೆ ಮಾಡಿದ್ದಾರೆ, ಕಲ್ಲು ಹೊತ್ತು ಕಟ್ಟಡಗಳನ್ನು ಕಟ್ಟಿದ್ದಾರೆ, ಗುಡ್ಡಕ್ಕೆ ಹೋಗಿ ಸೌದೆ ಕಡಿದು ತಂದಿದ್ದಾರೆ, ದನಕರುಗಳಿಗೆ ಮೈಯುಜ್ಜಿದ್ದಾರೆ, ಅವುಗಳಿಗೆ ನೀರುಣಿಸಿದ್ದಾರೆ, ವಿದ್ಯಾರ್ಥಿಗಳಿಗೆ ಪಾಠ ಮಾಡಿದ್ದಾರೆ, ದೂರದೂರದ ಗ್ರಾಮಗಳಿಗೆ ಉರಿವ ಬಿಸಿಲಿನಲ್ಲಿ, ಸುರಿವ ಮಳೆಯಲ್ಲಿ, ಹಗಲೆನ್ನದೆ ಇರುಳೆನ್ನದೆ ಕಾಲುನಡಿಗೆಯಲ್ಲಿ ನಡೆದು ಭಿಕ್ಷೆ ಬೇಡಿ ತಂದು ಲಕ್ಷ ಲಕ್ಷ ಹೊಟ್ಟೆಗಳನ್ನು ತೃಪ್ತಿಗೊಳಿಸಿದ್ದಾರೆ. ಗ್ರಾಮೀಣ ಬಂಧುಗಳಲ್ಲಿ ತಲೆದೋರಿದ ಸಮಸ್ಯೆಗಳನ್ನು ನ್ಯಾಯ ತೀರ್ಮಾನದ ಮೂಲಕ ಸರಿಪಡಿಸಿದ್ದಾರೆ, ಶ್ರೀಮಠದ ಧಾರ್ಮಿಕಾಚರಣೆಗಳಿಗೆ ವಿಶೇಷ ಆಸಕ್ತಿ ವಹಿಸಿ ಉತ್ಸವಾದಿಗಳನ್ನು ನಡೆಸಿದ್ದಾರೆ, ಸಾಹಿತ್ಯ ಸಮ್ಮೇಳನಾದಿ ಗಳನ್ನು ಆಯೋಜಿಸಿ ಅಚ್ಚುಕಟ್ಟಾಗಿ ನೆರವೇರಿಸಿದ್ದಾರೆ, ಶಿಕ್ಷಣ ಸಂಸ್ಥೆಗಳನ್ನು ಪೂರ್ವ ಪ್ರಾಥಮಿಕ ಹಂತದಿಂದ ವಿಶ್ವವಿದ್ಯಾಲಯದವರೆಗೆ ಸಂಸ್ಥಾಪಿಸಿದ್ದಾರೆ. ಶ್ರೀಮಠದ ಜಾತ್ರೆಗೆ ಹೊಸ ಹೊಸ ಯೋಜನೆಗಳನ್ನು ರೂಪಿಸಿ- ವಸ್ತುಪ್ರದರ್ಶನ, ಮಾಸಪತ್ರಿಕೆಯ ಪ್ರಕಟಣೆ, ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ಸಂಘದ ಮೂಲಕ ಭವ್ಯವಾಗಿ ಜರುಗುವಂತೆ ಮಾಡಿದ್ದಾರೆ. ಗ್ರಾಮಾಂತರ ಬಸವ ಜಯಂತಿಯ ಮೂಲಕ ಸಾವಿರಾರು ಗ್ರಾಮಗಳಲ್ಲಿ ಕರ್ನಾಟಕ ಉದ್ದಗಲದಲ್ಲಿ, ತಮಿಳುನಾಡು, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳಲ್ಲಿ ಬಸವತತ್ವ ಪ್ರಚಾರ ಸೇವೆ ನಡೆಸಿದ್ದಾರೆ. ಅಖಿಲ ಭಾರತ ವೀರಶೈವಮಹಾಸಭಾಧ್ಯಕ್ಷರಾಗಿ, ಕರ್ನಾಟಕ ಸರ್ಕಾರದ ಸಂಸ್ಕೃತಿ ಪ್ರಸಾರ ಇಲಾಖೆಯ ಸಮಿತಿಯ ಸದಸ್ಯರಾಗಿ, ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನಗಳ ಉದ್ಘಾಟಕರಾಗಿ ಸೇವೆಗೈದಿದ್ದಾರೆ. ತಮ್ಮ ಗುರುಪೂಜ್ಯರಾದ ಶ್ರೀ ಅಟವೀಸ್ವಾಮಿಗಳ ಮತ್ತು ಶ್ರೀ ಉದ್ದಾನಶಿವಯೋಗಿಗಳ ಜಯಂತಿಯನ್ನು ನಡೆಸಿಕೊಂಡು ಬರುತ್ತಿದ್ದಾರೆ. ಜೀವನದ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದವರಿಗೆ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು, ಪೂಜ್ಯ ಶ್ರೀ ಉದ್ದಾನಸ್ವಾಮಿಗಳವರ ಸ್ಮರಣಾರ್ಥ 'ಉದ್ದಾನಶ್ರೀ' ಪ್ರಶಸ್ತಿಗಳನ್ನು ಸಂಸ್ಥಾಪಿಸಿದ್ದಾರೆ, ಶ್ರೀ ಸಿದ್ಧಗಂಗಾ ಪ್ರಕಾಶನ ಸಂಸ್ಥೆಯ ಮೂಲಕ ನೂರಾರು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಪ್ರತಿವರ್ಷ ಶಿಕ್ಷಕರ ಸಮ್ಮೇಳನವನ್ನು ಸಮಾವೇಶಗೊಳಿಸುತ್ತ ಬಂದಿದ್ದಾರೆ. ಶ್ರೀಮಠದಲ್ಲಿ ಆಶ್ರಯ ಪಡೆದಿರುವ ಅನೇಕ ವಿದ್ಯಾರ್ಥಿಗಳಿಗೆ ಬಟ್ಟೆ, ಪುಸ್ತಕ, ಶಾಲಾ ಕಾಲೇಜು ಶುಲ್ಕ ನೀಡುತ್ತಿದ್ದಾರೆ. ಭಕ್ತಾಧಿಗಳಿಗೆ ಯಂತ್ರಧಾರಣೆ ಮಾಡುತ್ತಾರೆ, ಆಶ್ರಿತ ಶಿಕ್ಷಕಬಂಧುಗಳ ಕಷ್ಟ ಸಂಕಷ್ಟಗಳಲ್ಲಿ ಅಗತ್ಯ ನೆರವನ್ನು ನೀಡುತ್ತಿದ್ದಾರೆ. ಸಭೆ ಸಮಾರಂಭಗಳಿಗೆ ಸಾಹಿತಿ, ಕಲಾವಿದ, ವಿದ್ವಾಂಸರನ್ನು ಆಹ್ವಾನಿಸಿ ಗೌರವಿಸುತ್ತಿದ್ದಾರೆ. ಸಂಸ್ಕೃತ ವಿದ್ಯಾಭ್ಯಾಸಕ್ಕೆ ವಿಶೇಷ ಪ್ರೋತ್ಸಾಹ ಕೊಡುತ್ತಾ ಬಂದಿದ್ದಾರೆ, ಪ್ರತಿವರ್ಷ ಸಂಸ್ಕೃತೋತ್ಸವಗಳನ್ನು ನಡೆಸುತ್ತಿದ್ದಾರೆ, ಪೂಜ್ಯ ಶ್ರೀಗಳವರ ಕನ್ನಡಾಭಿಮಾನ ರಚನಾತ್ಮಕವಾದುದು. ಸರ್ಕಾರವೂ ಕನ್ನಡ ಪಂಡಿತ ವಿದ್ಯಾಭ್ಯಾಸವನ್ನು ನಿಲ್ಲಿಸಿದಾಗಲೂ ಕನ್ನಡ ಪಂಡಿತ ಕಾಲೇಜನ್ನು ಮುಂದುವರೆಸಿರುವ ಕ್ರಾಂತದೃಷ್ಟಿ ಶ್ರೀಗಳವರದು. ಸಮಾಜದ ಗುರು, ವಿರಕ್ತ ಮಠಗಳೊಂದಿಗೆ ಸಾಮರಸ್ಯ ಭಾವ ಸಂವರ್ಧನೆಗೆ ಶ್ರಮಿಸಿದ್ದಾರೆ. ಎಲ್ಲ ಸಮಾಜದ ಧರ್ಮಗುರುಗಳ ಗೌರವಾದರಗಳನ್ನು ಸಂಪಾದಿಸಿದ್ದಾರೆ. ಶ್ರೀಮಠವನ್ನು ಜಾತ್ಯಾತೀತ ಸಂಸ್ಥೆಯನ್ನಾಗಿ ನಿರ್ಮಾಣ ಮಾಡಿದ್ದಾರೆ. ಆಚಾರನಿಷ್ಠೆ, ವಿಚಾರ ಸ್ವಾತಂತ್ರ್ಯವನ್ನು ದೃಢವಾಗಿ ಪಾಲಿಸುತ್ತ ನಡೆದಿದ್ದಾರೆ. ಇವೆಲ್ಲ ಶ್ರೀಗಳವರು ನಡೆದು ಬಂದಿರುವ 'ದೀಪದ ಹೆಜ್ಜೆ'ಗಳಾಗಿವೆ. ಕಾಯಕಯೋಗಿಗಳಾಗಿ 'ಶಿವಯೋಗಿಯ ಶರೀರ ವೃಥಾ ಸವೆಯದಂತೆ'-'ಕೂಡಲಸಂಗನ ಒಲಿಸಲು ಬಂದ ಪ್ರಸಾದ ಕಾಯವನ್ನು ಕೆಡಿಸದಂತೆ' ಶ್ರೀಮಠವನ್ನು ಸಲಹುತ್ತ ಬಂದಿದ್ದಾರೆ. 102 ವರ್ಷಗಳ ತುಂಬು ವಯೋಮಾನದ ಪೂಜ್ಯರು 'ಜಗದಚ್ಚರಿ'ಯಾಗಿ ಮುನ್ನಡೆದಿದ್ದಾರೆ. ಶ್ರೀಗಳವರ ಸಾರ್ಥಕ ಸೇವಾ ಸ್ಮರಣಾರ್ಥ 'ಸಾರ್ಥಕ-80' ಸಮಾರಂಭವನ್ನು ನಡೆಸಲು ಇದೀಗ ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು, ಹಿತೈಷಿಗಳು ಸಂಕಲ್ಪದ ಮುಖಿಗಳಾಗಿ ಮುನ್ನಡೆದಿರುವುದು ನಾಡಿನ ಭಾಗ್ಯವಾಗಿದೆ.

'ಸಿದ್ಧಗಂಗಾ' ಎಲ್ಲರಿಗೆ ಯುಗಾದಿಯ ಶುಭಾಶಯಗಳನ್ನು ಹಾರೈಸಲು ಸಂತೋಷಿಸುತ್ತದೆ.

–ಸಂಪಾದಕ.







## ಜೀವನ ದೃಷ್ಟಿ

ಅರುವತ್ತು ಎಪ್ಪತ್ತು ವರ್ಷಗಳ ಹಿಂದೆ ಇದ್ದ ಜೀವನ ವಿಧಾನ ಇಂದಿಲ್ಲ. ಹಾಗೆಯೇ ಇರಬೇಕು ಎಂದಲ್ಲ. ಬದಲಾವಣೆ ಜೀವನಧರ್ಮ. ಗ್ರಾಮೀಣ ಜನತೆಯಲ್ಲಿ ಕಾಣುತ್ತಿದ್ದ ಪರೋಪಕಾರ ಬುದ್ಧಿ ವಿಶಾಲವಾಗಿತ್ತು. 'ತನಗಪಕರಿಸಿದ್ದವರಿಗುಪಕಾರವೆಣಿಪು'ದಾಗಿತ್ತು. ತನ್ನದಲ್ಲದ ಹೊಲ, ಮನೆಗಳ ಬಗ್ಗೆ ಅವರ ಮನೋಧರ್ಮ ಉತ್ತಮವಾದುದಾಗಿತ್ತು. ದಾರಿಯಲ್ಲಿ ನಡೆದು ಹೋಗುತ್ತಿರುವಾಗ ಸಗಣಿ ತೊಪ್ಪೆಯೇನಾದರೂ ಕಂಡರೆ ಅವರು ಅದನ್ನು ತೆಗೆದು ಪಕ್ಕದ ಹೊಲಕ್ಕೆ ಹಾಕಿ ಮುಂದುವರೆಯುತ್ತಿದ್ದರು. ಆ ಹೊಲ ತನ್ನದಲ್ಲವಾಗಿದ್ದರೂ ಆ ಬಗ್ಗೆ ತಲೆಕೆಡಿಸಿ ಕೊಳ್ಳುತ್ತಿರಲಿಲ್ಲ. ಕೃಷಿಕನಿಗೆ ಸಗಣಿ ಚಿನ್ನಕ್ಕೆ ಸಮಾನವಾದುದು. ಆ ಚಿನ್ನ ಎಲ್ಲಿರ ಬೇಕೋ ಅಲ್ಲಿದ್ದಾಗಲೇ ಅದರ ಪ್ರಯೋಜನ. ಜೀವನಾವಶ್ಯಕವಾದ ಸಗಣಿಯಲ್ಲಿ ರೈತ ಪರಮಾತ್ಮನ ಕರುಣೆಯ ಪ್ರಸಾದವನ್ನು ಕಾಣುತ್ತಿದ್ದ. ಅಷ್ಟೇ ಅಲ್ಲ ಅದನ್ನು ಸ್ವಾರ್ಥ ದೃಷ್ಟಿಯಿಂದ ಕಾಣುತ್ತಿರಲಿಲ್ಲ. ಬೆಳೆವ ಪೈರಿಗೆ ಬೇಕಾದ ಜೀವದ್ರವ್ಯವಾದ ಸಗಣಿ ವ್ಯರ್ಥವಾಗಿ ಹೋಗಬಾರದು. ಅದು ತನ್ನ ಹೊಲಕ್ಕೇ ಹಾಕಬೇಕು ಎಂಬ ಸಂಕುಚಿತ ಮನೋಭಾವ ಅವರದಾಗಿರಲಿಲ್ಲ. ಯಾರ ಹೊಲವಾದರೇನು? ಸಗಣಿ ಪ್ರಯೋಜನವಾಗಬೇಕು ಎಂಬ ವಿಶಾಲದೃಷ್ಟಿ ಅವರದು. ಇದೊಂದು ತುಂಬ ಚಿಕ್ಕ ವಿಷಯವಾಗಿ ತೋರಬಹುದು. ಆದರೆ ಚಿಕ್ಕದಾದವುಗಳಲ್ಲಿ ದೊಡ್ಡ ದಾದ ಜೀವನ ದೃಷ್ಟಿ ಅಡಗಿರುತ್ತದೆ. ಈ ಸಂದರ್ಭದಲ್ಲಿ ಗಾಂಧೀಜಿಯವರು ಅನುಸರಿಸುತ್ತಿದ್ದ ಒಂದು ಪ್ರಸಂಗ ನೆನಪಿಗೆ ಬರುತ್ತದೆ. ಅವರು ಬರೆಯುವುದಕ್ಕೆ ಬಳಸುತ್ತಿದ್ದ ಕಾಗದ ಹೇಗಿರುತ್ತಿತ್ತು ಎಂದರೆ, ವರ್ತಮಾನ ಪತ್ರಿಕೆಗಳ ಅಂಚಿನಲ್ಲಿ ಖಾಲಿಯಿದ್ದ ಕಡೆ, ತಮಗೆ ಬಂದ ಪತ್ರಗಳಲ್ಲಿ ಖಾಲಿಯಿದ್ದ ಕಡೆ, ಯಾವುದೇ ಕಾಗದವಾಗಲಿ ಅವುಗಳಲ್ಲಿ ಖಾಲಿ ಇದ್ದ ಜಾಗದಲ್ಲಿ ಬರೆಯುವ ಹವ್ಯಾಸ ಅವರದಾಗಿತ್ತು. ಬರೆಯಲು ತಯಾರಿಸಿದ ಕಾಗದ ವ್ಯರ್ಥವಾಗಿ ಉಳಿಯಬಾರದು ಎಂಬುದು ಗಾಂಧೀಜಿಯವರ ದೃಷ್ಟಿಯಾಗಿತ್ತು. ದೊಡ್ಡವರ ದೃಷ್ಟಿ ದೊಡ್ಡದಾಗಿಯೇ ಇರುತ್ತದಲ್ಲವೇ? ಗ್ರಾಮೀಣರು ಅನಕ್ಷರಸ್ಥರಾದರೂ ತಿಳಿವಳಿಕೆಯುಳ್ಳವರಾಗಿದ್ದರು. ಸಗಣಿಯಂಥದರಲ್ಲೂ ಜೀವರಸವನ್ನು ಕಾಣುವ ಪ್ರಾಜ್ಞರಾಗಿದ್ದರು. ಸ್ವಾರ್ಥ, ಸಂಕುಚಿತ ಭಾವನೆಗಳ ಕುಬ್ಜರಾಗಿರಲಿಲ್ಲ. 'ಇಟ್ಟರೆ ಸಗಣಿಯಾದೆ ತಟ್ಟಿದರೆ ಕುರುಳಾದೆ ಸುಟ್ಟರೆ ನೊಸಲಿಗೆ ವಿಭೂತಿಯಾದೆ' ಎಂಬ ಗೌರವ ಅವರಲ್ಲಿತ್ತು.

*

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

***ಅಪ್ರಶಿಖಾಮಂಡಲದಲ್ಲಿ***
***ಅಮೃತ ತೃಪ್ತಿಯೆಂಬ ಅಂಗನೆಯ ಉದರದಲ್ಲಿ***
***ಚಿತ್‌ಶಿಖೆಯೆಂಬ ಕಿಚ್ಚು ಹುಟ್ಟಿ***
***ಮೃತ್ಯುಗಳ ಮೊತ್ತವ ಸಂಹರಿಸಿ***
***ತತ್ತ್ವಂ ಅಸಿಯೆಂಬ ಪದವನುಂಗಿ***
***ಪರಾಪರವಾಯಿತ್ತು ಕಾಣಾ***
***ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.***

ಚಿದಂಗ ಚಿತ್ಪ್ರಾಣ ಚಿದಗ್ನಿ ಚಿದಾಕಾಶಂಗಳ ಗರ್ಭೀಕರಿಸಿಕೊಂಡು ನಿತ್ಯತ್ವದಿಂದೆ ಲಿಂಗದಲ್ಲಿ ಸಂತೃಪ್ತಿಯನುಳ್ಳ ಶರಣಸತಿಯ ಚಿದ್ಗರ್ಭದಲ್ಲಿ, ಜಾನಾಗ್ನಿಯೆಂಬ ಪ್ರಾಣಲಿಂಗೋದಯವಾಗಿ ಅಪಮೃತ್ಯು ಕಾಲ ಮೃತ್ಯುಗಳ ಸಮೂಹವ ನಷ್ಟವ ಮಾಡಿ ತ್ವಂ ಪದವಾಚ್ಯ ಸ್ವರೂಪಾದಾತ್ಮನನು, ತತ್ವದ ಸ್ವರೂಪಾದ ಬ್ರಹ್ಮದಲ್ಲಿ, ಅಸಿಪದ ಜ್ಞಾನದಿಂದ ಏಕಾರ್ಥವಾದಲ್ಲಿ ಅದಕ್ಕಧಿಕವಾದ ಪರವಸ್ತುವೆ ಯಾಗಿರ್ಪನು ಶಿವಶರಣನು – ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ– ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ– ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಆಯ್ದಕ್ಕಿ ಲಕ್ಕವ್ವಗಳ ನೆನೆನೆನೆದು ಸುಖಿಸುವ
ಲೋಕಕಲ್ಯಾಣದ ಮಂತ್ರವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಳ್ಳಿಗರ ಬಾಳಿಗೆ ಬೆಳ್ಳಿ ಬೆಳಕಾಗಿರುವೆ
ಸತ್ಯಶೀಲರನು ಸಲಹಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಸಿದ ಧರೆಗೆ ಹಾಲೆರೆದ ಜಂಗಮಲಿಂಗ
ವಸುಧೆಗೆ ಅಚ್ಚರಿ ಎನಿಸಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಿಸಿಲು ಎನ್ನಲಿಲ್ಲ ಬಿರುಗಾಳಿ ಎನಲಿಲ್ಲ
ಮಳೆಗಾಳಿ ಲೆಕ್ಕಿಸದೆ ಶ್ರಮಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಳ ನಿರಾಳದ ಘನವನಪ್ಪಿದ ಮಹಿಮ
ಬಾಳುದ್ದ ದಾಸೋಹ ನಡೆಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿದು ಆಚಾರವಾಣಿ ಅರಿದು ವಿಚಾರವೊರೆದೆ
ಅರಿವ ಸಿರಿಗಿರಿಯೆನಿಸಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಲವು ದೇವರ ಸಾರಿ ಹಣ್ಣು ಕಾಯಿಯ ಕೊಡುವ
ಬಲ್ಲಿದರು ತವಚರಣವರಿವರೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಆವ ಭೀತನು ಅಲ್ಲ ಆವ ಕರ್ಮಿಯು ಅಲ್ಲ'
ಆವ ಕಾಲಕೂ ಸ್ಮರಣೀಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೀಮೆ ಮೀರಿದ ಸೀಮ ನಿಸ್ಸೀಮ ಕುಲಚೆಲುವ'
ವೀರ ವಿರಕ್ತಿಯ ಶಿವಸೂರ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆ ಆನಂತವೆ ರೂಪಾಂತು ಬಂದಂತೆ
ಸಾಶಾಂತ ಶಿವನಾಗಿ ಚರಿಸುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**– ಹೆಚ್.ವಿ. ವೀರಭದ್ರಯ್ಯ**





## ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ

**–ಪ್ರೊ. ಡಿ. ಜವರೇಗೌಡ** *

ಇಪ್ಪತ್ತನೆಯ ಶತಮಾನ ಅತ್ಯಂತ ಕ್ರಾಂತಿಕಾರಿಯುಗ; ಆದರೆ ಆ ಕ್ರಾಂತಿ ಪಾರ್ಶ್ವಿಕವಾದದ್ದು, ಅಪಾಯಕಾರಿಯಾದದ್ದು, ವಿಚಾರ ವೈಭವದ ದೃಷ್ಟಿಯಿಂದ, ಕ್ರಾಂತಿಕಾರಿ ವಿಚಾರಗಳ ಸಮೃದ್ಧಿಯನ್ನು ಗಮನಕ್ಕೆ ತಂದುಕೊಳ್ಳುವುದಾದರೆ ವಚನಕಾರರ ಮುಂದೆ ಇಂದಿನ ಹಲವು ವಿಚಾರ ವೇತ್ತರು, ವಿದ್ಯಾವಂತರು ಮತ್ತು ಆಂದೋಲನಕಾರರು ಪಿಗ್ಮಿಗಳೆಂದೇ ಹೇಳಬೇಕು. ಕ್ರಾಂತಿಯ ಮುನ್ನಡೆಯಲ್ಲಿ ಸಮರ್ಥ ಭಾಷಾ ಮಾಧ್ಯಮದ ಅವಶ್ಯಕತೆಯನ್ನು ಕಂಡುಕೊಂಡವರಲ್ಲಿ ಬುದ್ಧನ ನಂತರ ಬಸವಣ್ಣ ಮತ್ತು ಅವರ ಅನುಯಾಯಿಗಳು ಮಾತ್ರ. ರಾಜಕೀಯ ಕ್ರಾಂತಿಯೋ, ಸಾಮಾಜಿಕ ಕ್ರಾಂತಿಯೋ ಅಥವಾ ಧಾರ್ಮಿಕ ಕ್ರಾಂತಿಯೋ, ಯಾವುದೇ ಕ್ರಾಂತಿಯ ಯಶಸ್ಸಿಗೆ ಸಂವಹನ ಮಾಧ್ಯಮ ಬಹುಮುಖ್ಯ ಎಂಬುದನ್ನವರು ಮನಸ್ಸಿಗೆ ತಂದುಕೊಳ್ಳುತ್ತಾರೆ. ಸಂಸ್ಕೃತವೊಂದೇ ದೇವ ಭಾಷೆಯಲ್ಲ, ಕನ್ನಡವೂ ದೇವ ಭಾಷೆ ಎಂದು ಘೋಷಿಸಿ, ಸರ್ವಸಾಮಾನ್ಯರ ಭಾಷಾ ವಾಹನದ ಮೂಲಕವಲ್ಲದೆ ಸಮಗ್ರ ಕ್ರಾಂತಿಯ ಪೂರ್ಣಾನುಷ್ಠಾನ ಸಾಧ್ಯವಿಲ್ಲವೆಂದು ಬಸವೇಶ್ವರಾದಿ ವಚನಕಾರರು ಕನ್ನಡ ಡಿಂಡಿಮವನ್ನು ಬಾರಿಸುತ್ತಾರೆ. ಅವರ ಈ ಡಿಂಡಿಮ ತಾಡನದಿಂದ ಕನ್ನಡ ಬುದ್ಧಿಯ ಭಾಷೆಯಾಗುತ್ತದೆ, ಧರ್ಮದ ಭಾಷೆಯಾಗುತ್ತದೆ; ಈ ಎಲ್ಲಕ್ಕಿಂತ ಮಿಗಿಲಾಗಿ ಕ್ರಾಂತಿಯ ಭಾಷೆಯಾಗುತ್ತದೆ. ಅದರ ಪೂರ್ಣ ಪ್ರಯೋಗದಿಂದಾಗಿ ಮೂಕರಿಗೆ ಮಾತು ಬರುತ್ತದೆ. ಹೆಳವನಿಗೆ ಕಾಲು ಬರುತ್ತದೆ; ದೀನದಲಿತರು ಆತ್ಮ ಶ್ರೀಮಂತರಾಗುತ್ತಾರೆ, ವಚನಕಾರರ ವೈಚಾರಿಕ ಪ್ರಖರತೆಯ ಈ ಭಾಷಿಕ ಕ್ರಾಂತಿಗೆ ಪ್ರೇರಕವಾಯಿತೆನ್ನುವುದರಲ್ಲಿ ಸಂದೇಶವಿಲ್ಲ.

ಕನ್ನಡ ಭಾಷೆ ವೈಚಾರಿಕ ಸ್ವಾತಂತ್ರ್ಯಕ್ಕೆ, ಅರ್ಥಾತ್ ವ್ಯಕ್ತಿ ಸ್ವಾತಂತ್ರ್ಯಕ್ಕೆ ಅನುವು ಮಾಡಿಕೊಡುತ್ತದೆ. ಅದರಿಂದ ಸಾಮಾನ್ಯ ಜನಕ್ಕೆ ಪ್ರಶ್ನೆ ಮಾಡುವ ಶಕ್ತಿ ಬರುತ್ತದೆ. ಚರ್ಚಾಗೋಷ್ಠಿ ಪಂಡಿತರಿಗೆ ಮತ್ತು ಉತ್ತಮ ಕುಲದಲ್ಲಿ ಹುಟ್ಟಿದವರಿಗೆ ಮಾತ್ರವೇ ಮೀಸಲಾಗಬೇಕಾಗಿಲ್ಲ; ಸಾಮಾನ್ಯರೂ ದೊಡ್ಡವರ ಜತೆಯಲ್ಲಿ ಸರಿಸಮನಾಗಿ ಕುಳಿತು ವಿಚಾರ ವಿನಿಮಯದಲ್ಲಿ ಪಾಲ್ಗೊಳ್ಳುತ್ತಾರೆ. ಅದರಿಂದಾಗಿ ಕನ್ನಡ ಸರ್ವಸಮಾನತೆಯ ಭಾಷೆಯಾಗುತ್ತದೆ. ಅದು ವಚನಕಾರರ ಬದುಕನ್ನು ಬಚ್ಚಿಡದೆ, ಬಿಚ್ಚಿಡುತ್ತದೆ.

ಭಾರತೀಯ ಸಾಹಿತ್ಯಕ್ಕೆ ರಾಮಾಯಣ ಭಾರತಗಳೇ ಮೂಲ, ಅವೇ ಕಲ್ಪವೃಕ್ಷ ಕಾಮಧೇನುಗಳು, ಅವುಗಳ ಅಧ್ಯಯನವೇ ವಿದ್ಯೆ ಎಂಬೊಂದು ಭಾವನೆ ಸಾಹಿತಿಗಳ ಮನಸ್ಸನ್ನಾಳುತ್ತಿದ್ದಾಗ, ನೂತನ ಮಾರ್ಗವನ್ನು ತೋರಿಸಿಕೊಟ್ಟ ಹರಿಕಾರರೇ ವಚನಕಾರರು. ವೇದ ಪುರಾಣಾಗಮಗಳಂತೆಯೇ ಇತಿಹಾಸ ಕಾವ್ಯಗಳನ್ನವರು ನಿರಾಕರಿಸಲಾಗಿ, ಕನ್ನಡ ಸಾಹಿತ್ಯದ ರೂಪ ಸ್ವರೂಪಗಳಲ್ಲಿ ಅಪೂರ್ವ ಕ್ರಾಂತಿ ಸಂಭವಿಸುತ್ತದೆ. ಶರಣರ ಸ್ವೋಪಜ್ಞತೆಯ ವೈಭವದ ಫಲವಾಗಿ ಮೂಡಿದ ವಚನ ಸಾಹಿತ್ಯದ ಛಾಯೆ ಮುಂದಿನ ಎಲ್ಲ ಶತಮಾನಗಳ ಕನ್ನಡ ಸಾಹಿತ್ಯದ ಮೇಲೆ ತಮ್ಮ ಪ್ರಭಾವವನ್ನು ಒಂದಲ್ಲ ಒಂದು ರೀತಿಯಲ್ಲಿ ಬೀರಿದೆ ಎಂದೇ ಹೇಳಬೇಕು. ಸಂಪ್ರದಾಯ ಭಂಜನೆಯೆ ಅದರ ಅಗ್ಗಳಿಕೆ.

ವಚನ ಸಾಹಿತ್ಯ ಕನ್ನಡದ ಅಮೂಲ್ಯ ಅಪೂರ್ವ ಆಸ್ತಿ. ಸಾಮಾಜಿಕ ಶ್ರೇಯಸ್ಸು ಧರ್ಮದ ಗುರಿಯಾಗಬೇಕು, ಸಾಮಾಜಿಕ ಬದ್ಧತೆ ಸಾಹಿತ್ಯದ ಬದುಕಾಗಬೇಕು ಎನ್ನುವಂತೆ ಹೊಸ ದಿಗಂತಗಳನ್ನು ತೆರೆದ ಕೀರ್ತಿ ಅದಕ್ಕೆ ಸಲ್ಲಬೇಕು. ಮಾನವೀಯತೆಗೆ ಹಾಗೂ ನಿರಂಕುಶಮತಿಗೆ ಪ್ರಧಾನ್ಯ ನೀಡಿದ್ದರಿಂದಲೇ ಅಂಥ ಮಹೋದ್ದೇಶ ಸಾಧನೆಗೆ ಸಾಧ್ಯವಾಗುತ್ತದೆ. ಅದು ಕಣ್ಕಟ್ಟಿನ, ಕಣ್ಣುಮುಚ್ಚಾಲೆಯ, ಇಂದ್ರಜಾಲದ ಸಾಹಿತ್ಯವಲ್ಲ; ಬದುಕಿನಿಂದ ಬದುಕಿಗಾಗಿ ಉದ್ಭವಿಸಿದ ವಾಸ್ತವ ಸಾಹಿತ್ಯ, ಹಸನದ ಬದುಕೇ ಅದರ ಗುರಿ. ಪಾಪ ಪುಣ್ಯಗಳ ಮಿಥ್ಯ ಕಲ್ಪನೆಗಳಿಂದ ಬದುಕನ್ನು ಪಾರು ಮಾಡಿದ ಮಣ್ಣಿನ ಸತ್ಯ ಸಾಹಿತ್ಯವದು.

* ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

***ಸುಖ ಬಂದಡೆ ಪುಣ್ಯದ ಫಲವೆನ್ನೆನು***
***ದುಃಖ ಬಂದಡೆ ಪಾಪದ ಫಲವೆನ್ನೆನು,***
***ನೀಮಾಡಿದಡಾಯಿತ್ತೆಂದೆನ್ನೆನು***

ಸುಖ ದುಃಖಗಳ ಹೊಣೆಯನ್ನು ಕಾಣದ ಹೆಗಲ ಮೇಲೆ ಜಾರಿಸಿ, ತನ್ನ ಜವಾಬ್ದಾರಿಯನ್ನು ಕಳೆದುಕೊಳ್ಳುವ ಹೇಡಿಯಲ್ಲ, ಶರಣ. ತನ್ನ ಕರ್ಮಗಳ ಕರ್ತೃವೂ ತಾನೇ, ತನ್ನ ವ್ಯಕ್ತಿತ್ವದ ಶಿಲ್ಪಿಯೂ ತಾನೇ ಎಂದು ಅರಿತ ಧೀರನವನು.

ಜಗತ್ತನ್ನು ಕುರಿತ ನಶ್ವರವಾದ ಮಾಯಾವಾದಗಳನ್ನು ತಿರಸ್ಕರಿಸಿದ್ದೇ ವಚನಕಾರರ ವಿಚಾರಸೂಕ್ಷ್ಮತೆಗೆ ಸಾಕ್ಷಿಯಾಗಿದೆ. ಸೃಷ್ಟಿಯಲ್ಲಿ ಸೃಷ್ಟಿಕರ್ತನೇ ಅಡಗಿರುವಾಗ ನಶ್ವರದ ಮಾತೆಲ್ಲಿಯದು? ಋತುನಿಯಮಕ್ಕನುಗುಣವಾದ ಪರಿವರ್ತನೆಯನ್ನೇ ನಶ್ವರವೆಂದು ಕರೆಯುವ ಪರಿಪಾಠವಿದೆ. ಹಗ್ಗ ಬೆಂದಾಗ ಬೂದಿಯ ರೂಪ ಪಡೆಯುತ್ತದೆ; ಹುಟ್ಟು ಸಾವುಗಳು ಸಹ ರೂಪಾಂತರಗಳಷ್ಟೆ. ಮಾಯಾವಾದವೂ ನಶ್ವಾವಾದದಷ್ಟೇ ಹುಸಿ. ಬ್ರಹ್ಮದಿಂದ ವ್ಯಾಪ್ತವಾದ ಜಗತ್ತು ಮಿಥ್ಯಯಾಗದು. ಮಾಯೆಯ ಅಸ್ತಿತ್ವವನ್ನೊಪ್ಪಿಕೊಳ್ಳುವುದಾದರೂ, ಅದು ಎಲ್ಲಿದೆ ಎಂಬುದು ವಚನಕಾರರ ಚಿಂತನೆಯ, ತರ್ಕದ ವಿಚಾರವಾದದ್ದು ಅಭೂತಪೂರ್ವ ಸಂಗತಿಯಾಗಿದೆ.

***ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ***
***ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ.***
***ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ***
***ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ***

ಮಾಯೆಯ ಸ್ವರೂಪಸ್ಥಾನಗಳನ್ನು ಯಥಾವತ್ತಾಗಿ, ಋತಧರ್ಮಕ್ಕನುಗುಣವಾಗಿ ನಿಷ್ಕರ್ಷಿಸಿದ ಈ ವಿನೂತನ ಮಾಯವಾದ ಜಗತ್ತಿನ ತತ್ವಶಾಸ್ತ್ರಕ್ಕೆ ವಚನಕಾರರು ನೀಡಿದ ಅಪೂರ್ವ ಕಾಣಿಕೆಯೆಂದೇ ಹೇಳಬಹುದು. ಇದು ನಿರಾಶೆ ನಿಷ್ಕ್ರಿಯೆಗಳನ್ನು ಬಡಿದೋಡಿಸಿ, ಮಾನವನಲ್ಲಿ ಆಶಾವಾದಿತ್ವವನ್ನೂ ಜೀವನೋತ್ಸಾಹವನ್ನೂ ಮೂಡಿಸಿ, ಬದುಕಿನ ಮೂಲಕವೇ ಬದುಕಿನಾಚೆಯ ಸತ್ಯವನ್ನು ಕಾಣುವ ಚೈತನ್ಯವನ್ನು ಅನುಗ್ರಹಿಸುತ್ತದೆಂದು ತಿಳಿಯಬಹುದಾಗಿದೆ.

ಗುರು ಕರುಣಿಸಿದ ಲಿಂಗಸ್ಥಲವನ್ನು ಮರೆತು ಬೇರೆ ಕಡೆಗೆ ಗಮನ ಹರಿಸುವ ವ್ಯಕ್ತಿಗೆ ಮೋಕ್ಷವೆಂತು ಸಾಧ್ಯ? ಲೌಕಿಕದಲ್ಲಾದರೂ ಸರಿಯೆ, ಒಂದು ಸ್ಥಾನದಲ್ಲಿ ಯಶಸ್ಸು ಪಡೆಯಲಾರದ ವ್ಯಕ್ತಿ ಬೇರೆ ಸ್ಥಾನದಲ್ಲಿ ಜಯ ಗಳಿಸುವುದುಂಟೆ? ವಚನಕಾರರ ಲೋಕಾನುಭವ ಅಸದೃಶವಾದುದು. ಅವರ ಬುದ್ಧಿ ಭಾವದ ಪ್ರಣಾಳಿಕೆಯಲಿ ಪ್ರವಹಿಸುವಾಗ ಭಾಷೆ ಕಾವ್ಯಮಯವಾಗುತ್ತದೆ.

***ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದು***
***ಕುದುರೆಯ ಬಯಸುವವರು ವೀರರೂ ಅಲ್ಲ,***
***ಧೀರರೂ ಅಲ್ಲ.***
***ಇದು ಕಾರಣ ನೆರೆ ಮೂರು ಲೋಕವೆಲ್ಲವು***
***ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ***
***ಗುಹೇಶ್ವರನೆಂಬ ಲಿಂಗವನರಿತ್ತಬಲ್ಲರು ?***

ಸ್ವಬುದ್ಧಿ ಸ್ವಶಕ್ತಿಗಳಿಂದ ಮನುಷ್ಯ ಶಿವಕಾರುಣ್ಯವನ್ನು ಪಡೆಯಬೇಕೇ ಹೊರರು, ಲೌಕಿಕ ಶ್ರೇಯಸ್ಸನ್ನು ಗಳಿಸಬೇಕೇ ವಿನಾ, ಕಟ್ಟಿಕೊಟ್ಟ ಬುತ್ತಿ ಹೇಳಿಕೊಟ್ಟ ಬುದ್ಧಿ ಬಹುಕಾಲ ಬಾಳಲಾರವು ಎಂಬ ಸಕಳೇಶ ಮಾದರಸನ ಅಮೃತವಾಣಿ ಎಲ್ಲ ಕಾಲಕ್ಕೂ ಅನ್ವಯಿಸುವಂಥದಾಗಿದೆ;

***ಏರಿಯ ಕಟ್ಟಬಹುದಲ್ಲದೆ, ನೀರ ತುಂಬಬಹುದೆ?***
***ಕೈದು ಕೊಡಬಹುದಲ್ಲದೆ, ಕಲಿತನವ ಕೊಡಬಹುದೆ?***
***ವಿವಾಹವ ಮಾಡಬಹುದಲ್ಲದೆ,***
***ಪುರುಷತನವನರಸಬಹುದೆ?***
***ಘನವ ತೋರಬಹುದಲ್ಲದೆ, ನೆನಹನಿಲಿಸಬಹುದೆ?***

ವೈಚಾರಿಕತೆಯಿಂದಲ್ಲದೆ, ವೈಜ್ಞಾನಿಕ ಮನೋಧರ್ಮದಿಂದಲ್ಲದೆ ಪ್ರಗತಿಯಾಗಲಿ, ಕ್ರಾಂತಿಯಾಗಲಿ ಯಾವ ಕ್ಷೇತ್ರದಲ್ಲಿಯೂ ಸಾಧ್ಯವಿಲ್ಲವೆಂಬುದಕ್ಕೆ ವಚನ ಸಾಹಿತ್ಯವೇ ಸಾಕ್ಷಿ; ಮಾನವನ ಶ್ರೇಯಸ್ಸಿಗಾದರೂ ಅವೇ ಬೇಕು. ಆದ್ದರಿಂದ ವಚನ ಸಾಹಿತ್ಯದ ಬಹು ಭಾಗ ಎಲ್ಲ ಕಾಲಕ್ಕೂ ಪ್ರಸ್ತುತವೆಂದೇ ಹೇಳಬೇಕಾಗುತ್ತದೆ.

***ಕಳಬೇಡ ಕೊಲಬೇಡ, ಹುಸಿಯ ನುಡಿಯಲುಬೇಡ;***
***ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ***
***ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,***
***ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ***

ಎಂಬ ಬಸವಣ್ಣನವರ ವಿಚಾರಮತಿಯ ಈ ಸುಪ್ತ ಸೂತ್ರ ಅಶಾಂತಿಯ ಜಗತ್ತಿನ ದಿವ್ಯಮಂತ್ರವಾಗಬೇಕಾಗಿದೆ.





ಬಸವೇಶ್ವರಾದಿ ಅನೇಕ ಅಪೂರ್ವಶಕ್ತಿಯ ಶರಣರು, ಆದಿ ವೀರಶೈವ ಯುಗದ ಕೆನೆಗೆಣೆಯ ಸಾರಸದೃಶ ಸ್ವತಂತ್ರ ಧೀಮಂತ ವಿಚಾರ ಕ್ರಾಂತಿಕಾರರ 'ದಯೆಯೇ ಧರ್ಮದ ಮೂಲವಯ್ಯ' ಎಂಬ ಪ್ರಮಾಣ ಮಂತ್ರವನ್ನು ಪಠಿಸುತ್ತ ಧ್ಯೇಯ ಸಾಧನೆಯ ಹಾದಿಯಲ್ಲಿಯೇ ಹುತಾತ್ಮರಾದದ್ದು ರಾಷ್ಟ್ರ ಭವಿಷ್ಯದ ದೃಷ್ಟಿಯಿಂದ ಅಪರಿಹಾರ್ಯ ನಷ್ಟವೆಂದೇ ಹೇಳಬೇಕು. ಆಜನ್ಮ ಬ್ರಹ್ಮಚಾರಿಯೂ, ವೈರಾಗ್ಯನಿಧಿಯೂ, ನಿತ್ಯನಿರಂಜನ ಪರಂಜ್ಯೋತಿಸ್ವರೂಪನೂ ಆದ ಪ್ರಭುದೇವರು ಕಲ್ಯಾಣಕ್ರಾಂತಿಯ ಸುಳುಹನ್ನು ಮುಂಗಂಡು, ಶ್ರೀಶೈಲದ ಮೂಲಕ ಪರಿವ್ರಾಜಕರಾಗಿ, ಪವಾಡೋಪದೇಶಗಳಿಂದ ಭಕ್ತರನ್ನು ತಣಿಸುತ್ತ, ನಾನಾ ನಾಮಗಳಿಂದ ಪ್ರಸಿದ್ಧರಾಗಿ ಕೊನೆಗೆ ಮಂಟೆಯಸ್ವಾಮಿಯಾಗಿ, ಧರೆಗೆ ದೊಡ್ಡವರಾಗಿ ಬೊಪ್ಪಗೌಡನಪುರದಲ್ಲಿ ಸಮಾಧಿಸ್ಥರಾಗುತ್ತಾರೆ. ಅದೇ ಸಮಯಕ್ಕೆ ಕಲ್ಯಾಣದ ಶರಣರಲ್ಲೊಬ್ಬರಾದ ಮಹದೇಶ್ವರರೂ ದಕ್ಷಿಣ ಕರ್ನಾಟಕದ ಮೂಡು ಮಲೆಯಲ್ಲಿ ನೆಲಸುತ್ತಾರೆ. ಬಸವಾದಿ ಪ್ರಮಥರಿಂದ ಸ್ಫೂರ್ತಿ ಪಡೆದ ಹರಿಹರ ರಾಘವಾಂಕರು ಕನ್ನಡ ಸಾಹಿತ್ಯಕ್ಕೆ ಹೊಸ ದಿಕ್ಕನ್ನು ತೋರಿಸಿದರೂ ಹೊಸ ಹೊಳಪನ್ನು ಕರುಣಿಸಿದರೂ, ಅಪೂರ್ವ ಸ್ವಾತಂತ್ರ್ಯವನ್ನು ಮೆರೆದರೂ, ಹಿಂದಿನ ಕ್ರಾಂತಿಯ ಬಿಸಿ ಮತ್ತೆ ಮರುಕಳಿಸಲಾರದು.

ತೋಂಟದ ಸಿದ್ಧಲಿಂಗೇಶ್ವರರು (1470) ತಮ್ಮ ಅಪಾರ ಸಾಧನೆ ಸಿದ್ಧಿ ವರ್ಚಸ್ಸುಗಳಿಂದ ಕನ್ನಡ ನಾಡಿನಲ್ಲೆಲ್ಲ ಧಾರ್ಮಿಕ ವಾತಾವರಣದ ಪುನಶ್ಚೇತನಕ್ಕೆ ವಿನೂತನ ಶಕ್ತಿಸಂಚಾರಕ್ಕೆ ಕಾರಣರಾಗಿ, ಮಂಕಾಗಿದ್ದ ವೀರಶೈವಕ್ಕೆ ವಿನೂತನ ಕಾಂತಿಯನ್ನು ತುಂಬಿ ಪುನರುಜ್ಜೀವನಗೊಳಿಸುತ್ತಾರೆ. ಅವರಿಂದ ಪ್ರಾರಂಭವಾದ ಹೊಸ ಶಕೆಯನ್ನು ವೀರಶೈವ ಪುನರುಜ್ಜೀವನಯುಗವೆಂದು ಕರೆಯಬಹುದು. ಈ ಯುಗದಲ್ಲಿ ಸಾಹಿತ್ಯ ಬೆಳೆಯಿತು, ಮಠಗಳು ವೃದ್ಧಿಗೊಂಡವು, ನಿಜ. ಆದರೂ ಹಿಂದಿನ ಕ್ರಾಂತಿಯ ಕಸುವನ್ನು ಮಾತ್ರ ಮತ್ತೆ ಕಾಣಲಾಗದು.

ಆಧುನಿಕ ವೀರಶೈವ ಯುಗದಲ್ಲಿ ವೀರಶೈವರು ಮಾತ್ರವಲ್ಲ, ವೀರಶೈವೇತರರೂ ವೀರಶೈವ ಸಾಹಿತ್ಯಾಧ್ಯಯನದಲ್ಲಿ ತೊಡಗಿರುವುದು ಸಾಮಾಜಿಕ ಕ್ಷೇಮದ ದೃಷ್ಟಿಯಿಂದ ಶುಭಸಂಕೇತವಾಗಿದೆ. ವೀರಶೈವರಾಗಲಿ, ವೀರಶೈವೇತರರಾಗಲಿ ಜಾತಿ ಕೋಮುಗಳ ಗೊಂದಲದಲ್ಲಿ ಸಿಕ್ಕಿಕೊಳ್ಳದೆ, ಮೌಲ್ಯಾಧಾರಿತ ಸಾಹಿತ್ಯ ರಚನೆ ಸಂಶೋಧನೆ ವ್ಯಾಖ್ಯಾನಗಳಲ್ಲಿ ತೊಡಗಿರುವುದರಿಂದ ಕನ್ನಡ ಸಾಹಿತ್ಯ ರಚನೆ ಸಂಶೋಧನೆ ವ್ಯಾಖ್ಯಾನಗಳಲ್ಲಿ ತೊಡಗಿರುವುದರಿಂದ ಕನ್ನಡ ಸಾಹಿತ್ಯದ ಭಾಗ್ಯದ ಬಾಗಿಲು ತೆರೆದಂತಾಗಿದೆ. ಆದರೆ ನಾಡಿನ ಆರೋಗ್ಯಕ್ಕೆ ಕಾರಣವಾಗಬಹುದಾದ ಆದಿ ವೀರಶೈವ ಯುಗದ ವಿಚಾರಕ್ರಾಂತಿಯನ್ನು ಪುನರುಜ್ಜೀವನಗೊಳಿಸದಿರುವುದು, ಬಸವೇಶ್ವರರ ದಿವ್ಯಾಮೃತ ಸಂದೇಶವನ್ನು ಪಾಲಿಸದಿರುವುದು, ವಚನಕಾರರ ಉಪದೇಶದ ಮುಲಾಮಿನಿಂದ ತುಕ್ಕು ಹಿಡಿದು ಜೀರ್ಣಗೊಂಡಿರುವ ಸಮಾಜದ ದೇಹವನ್ನು ದುರಸ್ತಿ ಪಡಿಸದಿರುವುದು, ಶರಣರ ವಿಚಾರಧಾರೆಯ ಶಸ್ತ್ರದಿಂದ ಸಮಾಜದಲ್ಲಿ ಬೆಳೆದಿರುವ ಅರ್ಬುದ ವ್ರಣವನ್ನು ಕತ್ತರಿಸದಿರುವುದು, ಯಾವ ಮತಕ್ಕೆ ವಿರುದ್ಧವಾಗಿ ಶರಣಮತ ತಲೆಯೆತ್ತಿತ್ತೋ ಅದೇ ಮತದ ಬಾಹ್ಯಾಚರಣೆಗಳನ್ನು ಅನುಕರಿಸುತ್ತ, ತನ್ನ ಸತ್ವವನ್ನು ಮರೆತಿರುವುದು ನಾಡಿನ ದೊಡ್ಡ ದುರಂತವಾಗಿದೆ. ಭರತಖಂಡದ ಇಂದಿನ ಎಲ್ಲ ಘೋರ ಸಮಸ್ಯೆಗಳಿಗೆ ಮದ್ದು ಆದಿ ವೀರಶೈವ ಯುಗದ ಶರಣರ ವಚನಗಳಲ್ಲಿ ಮಡುಗೊಂಡಿದೆಯೆಂಬುದನ್ನು ವಿಚಾರವಂತರು ಮರೆಯಲಾಗದು. ❑

---

ಧರ್ಮದ ತಳಹದಿಯ ಮೇಲೆ ಕಟ್ಟಲ್ಪಡುವ ನಾಗರಿಕತೆ ಸುಸಂಸ್ಕೃತವಾದದ್ದು. ನಮ್ಮ ಸಮಸ್ತ ಕ್ರಿಯಾಮುಖದಲ್ಲೂ ಧರ್ಮಬುದ್ಧಿ ಬರದಿದ್ದರೆ ನಾವು ಎಷ್ಟೇ ನಾಗರಿಕರೆನಿಸಿದರೂ ಸುಸಂಸ್ಕೃತರೆನಿಸಲಾರೆವು. ನಮಗೆ ಗಳಿಕೆ ಬಳಕೆ ಎರಡರ ಅರ್ಥವು ಆಗಬೇಕು. ಸಂಪಾದಿಸುವುದನ್ನೆಲ್ಲ ಧರ್ಮಬುದ್ಧಿಯಿಂದಲೇ ಅರಿತು ಬಳಕೆಮಾಡಬೇಕು. ಇದನ್ನು ಶರಣರು 'ದಾಸೋಹಂ ಭಾವ'ವೆಂದು ಕರೆದಿದ್ದಾರೆ. ಪಾಪದಿಂದ ಗಳಿಸಿದ ಅರ್ಥ ಪ್ರಾಯಶ್ಚಿತ್ತಕ್ಕೆ ವ್ಯಯವಾಗುತ್ತದೆಂಬುದರ ಅರಿವು ಎಲ್ಲರಿಗೂ ಮೂಡಿಬರಬೇಕು. ಪಾಪಬುದ್ಧಿಯಿಂದ ಏನನ್ನೂ ಸಂಗ್ರಹಿಸಬಾರದು.

**–ಶ್ರೀವಾಣಿ**

# ರಾಗಾದಿಗಳಿಗೆ ಒಂದು ವಿರಾಮ

–ಡಾ॥ ವಿಜಯಕುಮಾರಮಹಾನುಭಾವಿಗಳು*

*ಹಸಿವೆ ನೀನು ನಿಲ್ಲು ನಿಲ್ಲು ತೃಷೆಯೆ ನೀನು ನಿಲ್ಲು ನಿಲ್ಲು*
*ನಿದ್ರೆಯೇ ನಿಲ್ಲು ನಿಲ್ಲು ಕಾಮವೇ ನೀನು ನಿಲ್ಲು ನಿಲ್ಲು*
*ಕ್ರೋಧವೇ ನೀನು ನಿಲ್ಲು ನಿಲ್ಲು*
*ಲೋಭವೇ ನೀನು ನಿಲ್ಲು ನಿಲ್ಲು. ಮೋಹವೇನೀನು ನಿಲು ನಿಲ್ಲು*
*ಮದವೇ ನೀನು ನಿಲ್ಲು ನಿಲ್ಲು. ಮತ್ಸರವೇ ನೀನು ನಿಲ್ಲು ನಿಲ್ಲು*
*ಸಚರಾಚರವೇ ನೀನು ನಿಲ್ಲು ನಿಲ್ಲು. ನಾನು*
*ಚೆನ್ನಮಲ್ಲಿಕಾರ್ಜುನ ದೇವರ ಬಳಿಗೆ ಅವಸರದ*
*ಓಲೆಯನೊಯ್ಯುತ್ತಲಿದ್ದೇನೆ.*

ಅಕ್ಕಮಹಾದೇವಿಯವರು ಈ ವಚನದಲ್ಲಿ ದೇಹವನ್ನು ಕಾಡುವ ಹತ್ತು ಸಂಗತಿಗಳಿಗೆ ದೂರ ನಿಲ್ಲುವಂತೆ ಹೇಳುತ್ತಿದ್ದಾರೆ. ದೇಹವನ್ನು ಕಾಡುವ ಹತ್ತು ವಿಷಯಗಳು ಯಾವುವು? ಹಸಿವು, ತೃಷೆ, ನಿದ್ರೆ, ಕಾಮ, ಕ್ರೋಧ, ಲೋಭ, ಮದ, ಮತ್ಸರ, ಸಚರಾಚರಗಳು ಇವುಗಳೊಂದಿಗೆ ಈ ವಚನದಲ್ಲಿ ಅಕ್ಕಮಹಾದೇವಿಯವರು ಸಂಭಾಷಣೆ ನಡೆಸಿದ್ದಾರೆ. ಯಾರೊಂದಿಗೆ? ಏನೆಂದು ಸಂಭಾಷಣೆ ನಡೆದಿದ್ದಾರೆ. ಈ ಸಂಭಾಷಣೆ ಅನುಭಾವಿಗಳಿಗೆ, ಸಾಮಾನ್ಯರಿಗೆ ಕುತೂಹಲ ಉಂಟು ಮಾಡಿದೆ. ಇದೇನು ಬಳಿ ಯಾರೂ ಇಲ್ಲ. ಅಕ್ಕನವರು ಅನುಷ್ಠಾನದಲ್ಲಿದ್ದಾರೆ. ಆದರೆ ಅವರು ಯಾರೊಂದಿಗೆ ಸಂಭಾಷಣೆ ನಡೆಸಿದ್ದಾರೆ? ಅವರು ಸಂಭಾಷಣೆ ನಡೆಸಿರುವುದು ಹಸಿವೆ, ತೃಷೆ, ನಿದ್ರೆ ಅರಿಷಡ್ವರ್ಗಗಳ ಜೊತೆ. ಇವು ದೇಹವಿಡಿದು ಬಂದ ಪ್ರತಿ ಜೀವಿಗಳಿಗೆ ನಿತ್ಯದ ಒಂದು ಸ್ವಭಾವವಾಗಿದೆ. ಈ ದೇಹಕ್ಕೆ ಹಸಿವೆಯಾಗುತ್ತದೆ. ಬಾಯಾರಿಕೆಯಾಗುತ್ತದೆ. ನಿದ್ರೆ ಬರುತ್ತದೆ. ಇವು ಪ್ರತಿ ಜೀವಿಗಳಿಗೆ ಪ್ರತಿದಿನ ಅಭ್ಯಾಸವಾಗಿ ಹೋಗಿದೆ. ಹಸಿವೆಗೆ ಊಟವಿಲ್ಲದೆ ನಮ್ಮ ಜೀವನವಿಲ್ಲ. ಬಾಯಾರಿಕೆಗೆ ನೀರು ಕುಡಿಯದೆ ನಿರ್ವಾಹವಿಲ್ಲ. ದೇಹ ಬಳಲಿದ ಕಾಲಕ್ಕೆ ವಿಶ್ರಾಂತಿ. ನಿದ್ರೆ ಅತಿ ಅವಶ್ಯ. ಒಂದು ದಿನವೂ ನಾವು ಇವುಗಳನ್ನು ತಪ್ಪಿಸಿ ಬದುಕು ಸಾಗಿಸಲಾಗುವುದಿಲ್ಲ. ಹಸಿವೆಯಾದಾಗ, ಬಾಯಾರಿಕೆಯಾದಾಗ ನಿದ್ರೆಯಾದಾಗ ಇವುಗಳನ್ನು ನಾವು ಎಂದಿಗೂ ಬೇಡ ಎಂದು ಹೇಳಿಲ್ಲ. ಇವೆಲ್ಲವೂ ದೇಹಕ್ಕೆ ಸ್ವಭಾವ ಸಿದ್ಧವಾದವುಗಳು. ಹಸಿವೆಗೆ ಊಟ ಕೊಡುವುದರಿಂದ ನಮ್ಮ ದೇಹಕ್ಕೆ ಪೋಷಣೆ ಸಿಗುತ್ತದೆ. ಆದ ಕಾರಣ ರುಚಿಕಟ್ಟಾಗಿ ಸಿಹಿ, ಸವಿ, ಸ್ವಾದವಾದುದನ್ನು ಅಚ್ಚುಕಟ್ಟಾಗಿ ವ್ಯವಸ್ಥೆಗೊಳಿಸಿಕೊಂಡು ನಾವೆಲ್ಲ ತಿನ್ನುತ್ತೇವೆ. ಅಷ್ಟೇ ಅಲ್ಲ ತಿನ್ನುವ ಸುಖ ಮತ್ತು ಹಸಿವಿನ ನೋವು ದೂರಮಾಡುವ ಸುಖ ಊಟಕ್ಕೆ ಇರುವುದರಿಂದ ನಾವು ಊಟ ಮಾಡುವಾಗ ಮನೆಯ ಮಂದಿಯರೆಲ್ಲರೂ ಒಟ್ಟಿಗೆ ಕುಳಿತು ಊಟ ಮಾಡುತ್ತ ಮಧುರ ಮೈತ್ರಿಯನ್ನು ಬೆಳೆಸಿಕೊಳ್ಳುತ್ತೇವೆ. ಬಂಧು, ಬಾಂಧವರು, ಗೆಳೆಯರು, ಹಸಿದವರಿಗೂ ಹಂಚಿ ಉಣ್ಣುವುದರಲ್ಲಿ ಈ ಸುಖದ ಶಕ್ತಿ ಇನ್ನೂ ವಿಸ್ತಾರಗೊಳ್ಳುತ್ತದೆ. ಹೀಗೆ ನಮ್ಮ ಜೀವನವು ನಿತ್ಯ ಈ ಹಸಿವು, ತೃಷೆ, ನಿದ್ರೆಯಲ್ಲಿಯೇ ಮುಗಿದು ಹೋಗುತ್ತದೆ.

ನಿತ್ಯ ನಾವು ವಿದ್ಯಾರ್ಜನೆ ಮಾಡುವುದಾಗಲಿ, ಕಾಯಕ ಮಾಡುವುದಾಗಲಿ ಯಾವ ಕಾರಣಕ್ಕೆ? ಈ ಹಸಿವು ನೀಗುವುದಕ್ಕಾಗಿ, ತೃಷೆ, ನಿದ್ರೆಗಳಿಗೆ ಒಂದು ಆಸರೆ ಮಾಡಿಕೊಳ್ಳುವುದಕ್ಕಾಗಿಯೇ. ನಮ್ಮ ಜೀವನವು ಗಳಿಸುವುದು, ಗಳಿಸುವುದನ್ನು ಅನುಭೋಗಿಸುವುದರಲ್ಲಿಯೇ ಮುಗಿದು ಹೋಗುತ್ತದೆ. ಅಕಸ್ಮಾತ್ ಸಮಯ ಉಳಿಯಿತು. ಆ ಸಮಯವನ್ನು ಶರೀರ, ಇಂದ್ರಿಯದ ಭೋಗ, ವಿಷಯ, ಕಾಮಾದಿ ಅರಿಷಡ್ವರ್ಗಗಳನ್ನು ಅನುಭೋಗಿಸುವುದಕ್ಕೆ ವಿನಿಯೋಗಿಸುತ್ತೇವೆ. ಹಸಿವೆಗೆ ಹೊಟ್ಟೆ ತುಂಬಿಕೊಳ್ಳುವುದರಿಂದ ಹಸಿವೆ ಹೋಗುತ್ತದೆ. ವಿಶ್ರಾಂತಿ, ನಿದ್ರೆ ಕೊಡುತ್ತೇವೆ.

* ಪರಮಗುರು ಪ್ರಭುದೇವ ಧರ್ಮಪೀಠ, ಜೋಗ್‌ಫಾಲ್ಸ್ ಮಠ, ಮಾವಿನಗುಂಡಿ ಅಂಚೆ, ಸಿದ್ಧಾಪುರ ತಾ॥ ಉತ್ತರ ಕನ್ನಡ ಜಿಲ್ಲೆ.





ಈ ಕಾರಣವಾಗಿ ದೇಹ ಪುಷ್ಟಿಗೊಳ್ಳುತ್ತದೆ. ದೇಹ ಪುಷ್ಟಿಯಿಂದ ನಮ್ಮಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಇವುಗಳು ಮನೆ ಮಡಿಕೊಳ್ಳುತ್ತವೆ. ಕಾಮ ಎಂದರೆ ಏನು ಇಚ್ಚೆ. ಯಾವುದರ ಇಚ್ಚೆ. ಇಂದ್ರಿಯಗಳ ಇಚ್ಚೆ. ಅದು ವಿಷಯಗಳನ್ನು ಮತ್ತೆ ಮತ್ತೆ ಬೇಕು ಎನ್ನುತ್ತದೆ. ಇಲ್ಲಿಂದ ಆರಂಭವಾಗುತ್ತದೆ ದಾಹ. ಈ ದಾಹವು ಅದೆಷ್ಟು ಎಂದು ಹೇಳಿದರೆ ಅದು ದೇಹ ಇರುವವರೆಗೆ ಬೇಕು ಎನ್ನುತ್ತದೆ. ಇಲ್ಲಿಂದ ಆರಂಭವಾಗುತ್ತದೆ ದಾಹ. ಈ ದಾಹವು ಅದೆಷ್ಟು ಎಂದು ಹೇಳಿದರೆ ಅದು ದೇಹ ಇರುವವರೆಗೆ ಬೇಕು ಎನ್ನುತ್ತದೆ. ಈ ಬೇಕು ಎಂಬುದು ಒಂದೆ ಎರಡೆ? ಅವುಗಳಿಗೆ ಕೊನೆ ಮೊದಲಿಲ್ಲ. ಇದು ಮುಗಿಯದ ಸರಪಳಿ. ಹಸಿವೆಯಾದಾಗ ರುಚಿರುಚಿಯಾದ ಊಟಬೇಕು. ಕುಡಿಯುವುದಕ್ಕೆ ಹಾಲಿನ ಜೊತೆಗೆ ಹಣ್ಣಿನ ರಸಗಳು ಬೇಕು. ಇದಕ್ಕೂ ಕೊನೆ ಮೊದಲಿಲ್ಲ. ಇನ್ನು ನಿದ್ರೆಗೆ ಏನೆಲ್ಲ ಬೇಕು. ಹೀಗೆ ಈ ದೇಹವು ಬೇಕು ಬೇಕು ಎಂದು ಕೇಳುತ್ತಲೇ ಇರುತ್ತದೆ. ಮಲಗಲು ಒಂದು ಸೊಗಸಾದ ಮನೆ ಬೇಕು. ಬೆಂಗಳೂರಿನಂತಹ ನಗರದಲ್ಲಿ ಅದೂ ಸದಾಶಿವ ನಗರದಲ್ಲಾದರೆ ಇನ್ನೂ ಚೆಂದ. ಆ ಮನೆಯಲ್ಲಿ ಏನೆಲ್ಲ ಸೌಲಭ್ಯಗಳು ಬೇಕು. ಹೀಗೆ ಮನುಷ್ಯನಿಗೆ ಬೇಕು ಬೇಕು ಎಂಬುದು ಒಂದು ಕೊನೆ ಮೊದಲಿಲ್ಲದ ದಾಹ. ಇವನ ದಾಹಕ್ಕೆ ಒಂದು ಕೊನೆ ಇಲ್ಲ. ಅದಕ್ಕೆ ಒಂದು ಕತೆ ಹೇಳುತ್ತೇನೆ.

ಒಬ್ಬ ದಾರಿಹೋಕ ದಾರಿಯಲ್ಲಿ ನಡೆದುಹೋಗುತ್ತಿದ್ದ. ಅಲ್ಲಿ ಒಂದು ತೋಟ ಎದುರಾಯಿತು. ಬಿಸಿಲು ಬಹಳವಾಗಿತ್ತು. ಆ ತೋಟದ ಕಡೆಗೆ ನೋಡಿದ. ತೆಂಗಿನ ಮರಗಳು ಬಹಳ ಇದ್ದವು. ಅಲ್ಲಿ ಸೊಗಸಾದ ಹದವಾದ ಕೆಂದೆಳನೀರು ಕಾಣಬಂದವು. ಇವನಿಗೆ ಬಾಯಾರಿಕೆಯಾಗಿತ್ತು. ಕೆಂದೆಳನೀರಿನ ರುಚಿ ಇವನ ಮನಸ್ಸನ್ನು ಸೆಳೆಯಿತು. ತೋಟದವರಿಂದ ಒಂದು ಎಳನೀರು ಕೇಳು ಪಡೆಯಬೇಕು ಎಂದು ತೋಟದೊಳಗೆ ಹೋದ. ತೋಟದವರು ಯಾರೂ ಇರಲಿಲ್ಲ. ಸರಿ ನಾನೆ ಹತ್ತಿ ಒಂದು ಕಿತ್ತು ಕುಡಿದು ಬಿಡೋಣ ಎಂದು ಮರದ ಹತ್ತಿರ ಹೋದ. ಮರದ ತುಂಬ ಹದವಾದ ಎಳನೀರಿನ ಗುದಿಗಳು ತೂಗಾಡುತ್ತಿವೆ. ಅತ್ತ ಇತ್ತ ನೋಡಿದ ಒಂದು ಕ್ಷಣ ನಿಂತ. ಇವನೇ ಮರ ಹತ್ತಿದ. ಒಂದು ಕಿತ್ತ. ಆಸೆ ಆಯಿತು. ಇನ್ನೊಂದು ಕಿತ್ತ. ಇನ್ನೊಂದು ಇನ್ನೊಂದು ಕಿತ್ತು ಹಾಕುತ್ತ ಹೋದ. ತೋಟದ ಮಾಲೀಕರು ಯಾರೂ ಇಲ್ಲ. ಕಿತ್ತು ಹೊತ್ತುಕೊಂಡು ಹೋದರಾಯಿತು ಎಂದು ಒಂದೊಂದಾಗಿ ಕೀಳುತ್ತ ಹೋದ. ಆ ತೆಂಗಿನಕಾಯಿಗಳನ್ನು ನೋಡುತ್ತಿದ್ದಂತೆ ಮತ್ತೆ ಕೀಳಬೇಕೆಂಬ ಮನಸ್ಸಾಗುತ್ತಿತ್ತು. ಕೈ ಜಾರುತ್ತಿತ್ತು. ಒಂದು ಕೈಲಿ ಮರ ಹಿಡಿದಿದ್ದಾನೆ. ಇನ್ನೊಂದು ಕೈಯಲ್ಲಿ ಎಳನೀರು ಕೀಳುತ್ತಿದ್ದಾನೆ. ಹಾಗೆ ಕೀಳುತ್ತಿರಬೇಕಾದರೆ ಹದವಾದ ಎಳನೀರಿನ ಇನ್ನೊಂದು ಗುದಿ ಪಕ್ಕದಲ್ಲಿ ಕಂಡಿತು ಅದರಲ್ಲಿಯೂ ಒಂದು ಎಳನೀರು ಕೀಳಬೇಕು ಎಂದು ತೆಂಗಿನಮರದ ಇನ್ನೇನು ಬೀಳಲಿರುವ ಒಂದು ಗೊದಮೊಟ್ಟೆಯನ್ನು ಹಿಡಿದು ಎಳನೀರು ಕೀಳಲು ಹೋದ. ದಡಾರ್ ಎಂದು ಗೊದಮೊಟ್ಟೆ ಕೆಳಗೆ ಜಾರಿತ್ತು. ಅದರ ಜೊತೆಗೆ ಇವನೂ ಕೆಳಗೆ ಬಿದ್ದ ಪ್ರಾಣವೇ ಹೋಯಿತು. ತನ್ನದಲ್ಲದ ತೋಟ. ಒಂದು ಎಳನೀರಿನ ಆಸೆಗೆ ಹೋದವನು ಇನ್ನೂ ಹೆಚ್ಚು ಆಸೆ ಮಾಡಿ ಕೆಳಗೆ ಬಿದ್ದು ಪ್ರಾಣ ಕಳೆದುಕೊಂಡ. ಹೀಗೆ ಮನುಷ್ಯರು ದೇಹ ಪೋಷಣೆ ಮಾಡುವ ಮೋಹದಲ್ಲಿ ಅತಿಯಾಗಿ ತಿಂದು ಆರೋಗ್ಯ ಕೆಡಿಸಿಕೊಳ್ಳುತ್ತಾನೆ. ದೇಹದ ಮದದಿಂದ ಎಷ್ಟೋ ಸಲ ವಿವೇಕ ಕಳೆದುಕೊಂಡು ವರ್ತಿಸುತ್ತಾನೆ. ದುಃಖಕ್ಕೆ, ಪ್ರಾಣಘಾತಕ್ಕೆ ಒಳಗಾಗುತ್ತಾನೆ. ಅವನು ಒಂದು ಎಳನೀರಿಗೆ ಆಶೆ ಮಾಡಿದಂತೆ ನಾವು ಒಂದು ಸೈಟಿಗೆ, ಒಂದು ಎಕರೆ ಭೂಮಿಗೆ, ಲಕ್ಷ 50 ಲಕ್ಷ ಕೋಟಿ ಹತ್ತು ಕೋಟಿಗೆ ನೂರು ಸಾವಿರ ಕೋಟಿಗೆ ಆಶೆ ಮಾಡಿ ದುಃಖದಲ್ಲಿ ಬೀಳುತ್ತೇವೆ. ಇನ್ನೂ ಬೇಕು ಇನ್ನೂ ಬೇಕು ಎಂದು ನಮ್ಮ ಜೀವನವನ್ನು ದುಃಖಕ್ಕೆ ಒಳಗು ಮಾಡಿಕೊಳ್ಳುತ್ತೇವೆ. ಇದನ್ನೇ ಬಸವಣ್ಣನವರು ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸೆಯಯ್ಯಾ ಎನ್ನುತ್ತಾರೆ. ಹಸುಗೆ ಹುಲ್ಲು ಬೇಕು. ಅದು ಯಾರ ಹೊಲ, ಗದ್ದೆ ತೋಟದದ್ದಾದರೇನು? ಹೊಲದವರು ಹೊಡೆಯುತ್ತಾರೆ ಎಂಬುದು ಅದಕ್ಕೆ ಆಗ ಗೊತ್ತಾಗುವುದಿಲ್ಲ. ಮನುಷ್ಯನೂ ಅಷ್ಟೆ. ಹಸಿವೆಗೆ ಬೇಕು ಬೇಕು ಎಂದು ಆಶೆ ಮಾಡುತ್ತಾನೆ.

*ಆಶೆಗೆ ಸತ್ತುದು ಕೋಟಿ ಆಮಿಷಕ್ಕೆ ಸತ್ತುದು ಕೋಟಿ*
*ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ*

*ಗುಹೇಶ್ವರಾ ನಿಮಗಾಗಿ ಸತ್ತವನಾರನೂ ಕಾಣೆ.*

ಮನುಷ್ಯನಿಗೆ ಆಶೆ ಬಹಳ. ಮನುಷ್ಯನು ಈ ಸಂಪತ್ತಿಗೆ, ಅಧಿಕಾರಕ್ಕೆ, ಭೂಮಿಗೆ, ಭೋಗಕ್ಕೆ ಆಶೆ ಮಾಡುತ್ತಾನೆ. ಜಗತ್ತಿನ ಪ್ರತಿ ಜೀವಜಾಲವೆಲ್ಲ ಇದನ್ನೆ ಆಶೆ ಮಾಡುತ್ತವೆ. ಹಸಿವು, ತೃಷೆ, ಭೋಗ ಇವನ್ನು ಬಿಟ್ಟು ಜೀವದ ಬಾನವಿಲ್ಲ. ಇದು ಪ್ರತಿ ಜೀವಿಯ ಹಣೆಗೆ ಬರೆದಿಟ್ಟ ವಿಧಿ. ಇವನ್ನು ಯಾರು ತಾನೆ ತಪ್ಪಿಸಬಲ್ಲರು? ಹಸಿವು, ತೃಷೆ, ನಿದ್ರೆ ಕಾಮಾದಿಗಳನ್ನು ಕುರಿತು ಅಕ್ಕಮಹಾದೇವಿಯವರು ಏನು ಹೇಳುತ್ತಿದ್ದಾರೆ? ಹಸಿವೆ ನೀನು ನಿಲ್ಲು ನಿಲ್ಲು ಎನ್ನುತ್ತಿದ್ದಾರೆ. ನಾವು ಎಂದಾದರೂ ಹಸಿವೆ ಹೀಗೆ ಹೇಳಿದ್ದು ಉಂಟೆ? ಇಲ್ಲ. ರುಚಿರುಚಿಯಾದ ಊಟ ಕೊಡುತ್ತೇವೆ. ಅಕ್ಕಮಹಾದೇವಿಯವರು ಇವುಗಳಿಗೆ ಏನು ಹೇಳುತ್ತಿದ್ದಾರೆ. ಹಸಿವೆ ನೀವು ಸ್ವಲ್ಪ ದೂರ ನಿಲ್ಲಿ. ಇಷ್ಟು ದಿನ ನೀವು ಕೇಳಿದಾಗಲೆಲ್ಲ ಇಲ್ಲೆನ್ನದೆ ಕೊಟ್ಟಿದ್ದೇನೆ. ಇಂದು ನನಗೆ ಒಂದು ತುರ್ತು ಕೆಲಸವನ್ನು ಶರಣರು ವಹಿಸಿದ್ದಾರೆ. ಬಾಯಾರಿಕೆಯೇ ನೀನು ಸ್ವಲ್ಪ ದೂರ ನಿಲ್ಲು. ಇಷ್ಟು ದಿನ ನೀವು ಬಯಸಿದಾಗಲೆಲ್ಲ ಈ ದೇಹಕ್ಕೆ ಊಟ, ನೀರು ಕೊಟ್ಟಿದ್ದೇನೆ. ಹಸಿವೆಯಾದಾಗ ಅಕ್ಕಮಹಾದೇವಿಯವರು ಹಸಿವೆಗೆ ದೂರ ನಿಲ್ಲು ಎಂದು ಹೇಳಿದ್ದಾರೆ. ಬಾಯಾರಿದಾಗ ಬಾಯಾರಿಕೆಗೆ ದೂರ ನಿಲ್ಲು ಎಂದು ಹೇಳಿದ್ದಾರೆ. ನಿದ್ರೆಗೆ ನೀನು ದೂರ ನಿಲ್ಲು ನಿಲ್ಲು ಎಂದು ಹೇಳಿದ್ದಾರೆ. ನಾವು ನಮ್ಮ ಬದುಕಿನಲ್ಲಿ ನಮಗೆ ಹಸಿವೆಯಾದಾಗ, ತೃಷೆಯಾದಾಗ, ನಿದ್ರೆಯಾದಾಗ ನಿಲ್ಲು ಎಂದು ಹೇಳಿದ್ದೇವೆಯೇ?

ಅಕ್ಕಮಹಾದೇವಿಯವರಿಗೆ ಚೆನ್ನಮಲ್ಲಿಕಾರ್ಜುನ ದೇವರ ಹಂಬಲ ಅಪಾರವಾಗಿದೆ. ಆ ಕಾರಣವಾಗಿ ಅವರು ನನಗೆ ಪರಮಾತ್ಮ ಬೇಕು ಎನ್ನುತ್ತಾರೆ. ಹಸಿವೆ, ತೃಷೆ, ನಿದ್ರೆಗಳನ್ನು ಲೆಕ್ಕಿಸದೆ ಪರಮಾತ್ಮನ ಹಂಬಲದ ಕಡೆಗೆ ಮುಖ ಮಾಡಿದ್ದಾರೆ. ಅವರು ಮುಂದುವರಿದು ಅರಿಷಡ್ವರ್ಗಗಳಿಗೆ ನಿಲ್ಲು ನಿಲ್ಲು ಎಂದು ಹೇಳಿದ್ದಾರೆ. ಕಾಮವನ್ನು ಹತ್ತಿರ ಸುಳಿಯಗೊಟ್ಟಾಗ ಏನೆಲ್ಲಾ ಅನಾಹುತಗಳಾಗಿವೆ. ಆಗುತ್ತದೆ? ಲೋಕದಲ್ಲಿ ಅನಾಹುತಗಳು ಸಂಭವಿಸುವುದು ಕಾಮ, ಕ್ರೋಧಾದಿ ಗಳಿಂದಲೆ. ಅರಿಷಡ್ವರ್ಗಗಳು ಮನುಷ್ಯನ ಇಳಿಯುವಿಕೆಗೂ ಕಾರಣ. ಏರುವಿಕೆಗೂ ಕಾರಣ. ನಮ್ಮ ಬದುಕು ಸಾತ್ವಿಕ ಪಥದಲ್ಲಿ ಇದ್ದಾಗ ಅಲ್ಲಿ ಕೋಪ ಸಾತ್ವಿಕದ ಕಡೆಗೆ ಇದ್ದಾಗ ಪ್ರಗತಿಯ ಕಡೆಗೆ ಬದುಕು ಸಾಗುತ್ತದೆ. ನಮ್ಮ ಅರಿಷಡ್ವರ್ಗಗಳು ತಾಮಸಿಕ ದಾರಿಯಲ್ಲಿ ಸಾಗಿದಾಗ ನಮ್ಮ ಬದುಕು ಪತನದ ಕಡೆಗೆ ಸಾಗುತ್ತದೆ. ಇಂತಹ ದಾಹಗಳಿಗೆ ಒಂದು ಕೊನೆಯನ್ನು ಹೇಳಲು ಅಕ್ಕಮಹಾದೇವಿಯವರು ನಿರ್ಧರಿಸಿದ್ದಾರೆ. ಅವರಿಗೆ ಚೆನ್ನಮಲ್ಲಿಕಾರ್ಜುನ ಬೇಕು. ಆದುದರಿಂದ ಅವರು ಹಸಿವು ತೃಷೆಗಳ ಜೊತೆ ಮಾತಮಾಡ ತೊಡಗಿದ್ದಾರೆ. ಅವರು ಸಚರಾಚರವೇ ನೀನು ನಿಲ್ಲು ನಿಲ್ಲು ಎಂದು ಹೇಳುತ್ತಿದ್ದಾರೆ. ಅಕ್ಕಮಹಾದೇವಿಯವರು ಲೌಕಿಕವನ್ನು ಸ್ವಲ್ಪ ದೂರ ಇರಿ ಹತ್ತಿರ ಬರಬೇಡಿ ಎನ್ನುತ್ತಿದ್ದಾರೆ. ನಾವು ಲೌಕಿಕವಾದಷ್ಟು ದುಃಖಗಳು, ಮೋಹಗಳು ಹೆಚ್ಚು, ನಾವು ಪ್ರಪಂಚವನ್ನು ನಮಗೆ ಹತ್ತಿರ ಮಾಡಿಕೊಂಡಷ್ಟು ಲೌಕಿಕದಲ್ಲಿ ಮುಳುಗುತ್ತೇವೆ. ಲೌಕಿಕ ನಮ್ಮನ್ನು ಆಳಿಸುತ್ತದೆ, ನಗಿಸುವುದಿಲ್ಲ. ಲೌಕಿಕದಲ್ಲಿ ಸ್ವಾತಂತ್ರ್ಯಕ್ಕೆ ಅವಕಾಶವಿಲ್ಲ. ಅಲೌಕಿಕದಲ್ಲಿ ಸಿಕ್ಕಾಪಟ್ಟೆ ಸ್ವಾತಂತ್ರ್ಯ ನಮ್ಮ ವಿಚಾರ, ಚಿಂತನೆಗಳು ಜೀವನ ವಿಧಾನಕ್ಕೆ ಅಲ್ಲಿ ಗೌರವ ಮಾನ್ಯತೆ ಇದೆ. ನಾವು ಪ್ರಪಂಚ ಬಿಟ್ಟು ಬದುಕಲು ಬರುವುದಿಲ್ಲ. ಪ್ರಪಂಚ ನಮಗೆ ಎಷ್ಟು ಬೇಕೋ ಅಷ್ಟು ಜೀವನವನ್ನು ನಡೆಸಿಕೊಂಡು ಹೋಗಬೇಕು. ಈ ಲೌಕಿಕವನ್ನು ಒಳಹೊಕ್ಕು ವಿಶ್ಲೇಷಿಸಿದ ಅಕ್ಕಮಹಾದೇವಿಯವರು ಹೇಳುತ್ತಿದ್ದಾರೆ. ಇದು ಇಷ್ಟೆ, ನಮಗೆ ಇದು ಬಲು ದುಃಖವನ್ನು ಕೊಡುತ್ತದೆ. ಆದುದರಿಂದ ಲೌಕಿಕದಲ್ಲಿ ಸಂಬಂಧವನ್ನು ಬೆಳೆಸುವಾಗ ಎಚ್ಚರದಿಂದ ಇರಬೇಕು ಎನ್ನುತ್ತಾರೆ.

ಕಾಮದಿಂದ ಕೀಚಕ ಕೆಟ್ಟ, ಕ್ರೋಧದಿಂದ ವಿಶ್ವಾಮಿತ್ರ ಕೆಟ್ಟ, ಕಾಮ, ಕ್ರೋಧ ಜಗತ್ತನ್ನೆಲ್ಲ ಹಾಳು ಮಾಡಿದೆ. ಅದೇ ಕಾಮವನ್ನು ಪ್ರೀತಿ, ಭಕ್ತಿಯಾಗಿಸಿಕೊಂಡವರು ಮಹಾತ್ಮರಾದರು. ಕ್ರೋಧ ಎಂದರೆ ಕೋಪವನ್ನು ಇಂದ್ರಿಯಗಳಿಗೆ ತಿರುಗಿಸಿಕೊಂಡವರು ಸಂಯಮಿಗಳಾದರು. ಶಾಂತರಾದರು. ವಸಿಷ್ಠರಂತಹವರು ಬ್ರಹ್ಮರ್ಷಿಗಳಾದವರು. ಲೋಭ, ಮೋಹದಿಂದ ಸಾಮಾನ್ಯ ಮಾನವರು ಲೌಕಿಕರಾದರು, ದುಃಖಿಗಳಾದರು. ಈ ಲೋಭ, ಮೋಹವನ್ನು ಗುರುವಿನ ಮಹಾತ್ಮರ ಪ್ರಸಾದ. ಅನುಗ್ರಹದ ಕಡೆಗೆ ಹೊರಳಿಸಿದವರು ಗುರುವಿನ ಶಿಷ್ಯರಾದರು. ಪರಮಾತ್ಮನ ಮಕ್ಕಳಾದರು. ಮದ, ಮತ್ಸರ ಯಾರನ್ನೂ ಸುಖವಾಗಿರಲು ಬಿಟ್ಟಿಲ್ಲ. ಮದದಿಂದ ದುರ್ಯೋಧನ ಕೆಟ್ಟ, ಮತ್ಸರದಿಂದ ದುಶ್ಶಾಸನ ಕೌರವರು ಕೆಟ್ಟರು. ಇವು ಬೆಂಕಿಯಿದ್ದಂತೆ. ಮೊದಲು ಇವು ಇರುವ ಸ್ಥಳವನ್ನು ಸುಡುತ್ತವೆ. ಹೊತ್ತಿದ ಕಿಚ್ಚು ಮೊದಲು ಆ ಮನೆ ಸುಟ್ಟು ನಂತರ ನೆರೆಮನೆಯನ್ನು ಸುಡುತ್ತವೆ. ಹಾಗೆ ಮನುಷ್ಯರಲ್ಲಿ ಮದ, ಮತ್ಸರ ಬಂದರೆ ಮೊದಲು ಆ ವ್ಯಕ್ತಿ ಸರ್ವನಾಶವಾಗುತ್ತಾನೆ. ಇವೆಲ್ಲವನ್ನು ದೂರ ಮಾಡಿದ ಕಾರಣವಾಗಿ ಅಕ್ಕಮಹಾದೇವಿಯವರು ಪರಿಪೂರ್ಣರಾದರು. ಪರಿಪೂರ್ಣತೆ ಎಂದರೇನು? ಮನುಷ್ಯರು ಬೇಕು ಬೇಕು ಎಂಬ ವಿಷಯದ ದಾಹವನ್ನು ಬಿಡಬೇಕು. ವಿಷಯ ಬಿಟ್ಟು ನಿರ್ವಿಷಯಿಯಾಗುವುದೇ ಪೂರ್ಣತೆ. ಅದು ಒಂದು ಎತ್ತರ. ಇದು ಸಾಧನೆಯಿಂದ ಬರುತ್ತದೆ. ಜ್ಞಾನದಿಂದ ಬರುತ್ತದೆ. ಮನುಷ್ಯ ಸಂಬಂಧಗಳು ಯಾಕೆ ಮಧುರವಾಗುವುದಿಲ್ಲ ಎಂದರೆ ನಾವು ಇನ್ನೊಬ್ಬ ರಿಂದ ನಮಗೆ ಇದು ಬೇಕು, ಅದು ಬೇಕು ಎಂದು ನಿರೀಕ್ಷಿಸುತ್ತಲೆ ಇರುತ್ತೇವೆ. ಆದರೆ ನಾವು ಕೊಡಲು ಸಿದ್ಧರಿಲ್ಲ. ಈ ಆಶೆಯ ನಿರೀಕ್ಷೆ ಹೋಗಬೇಕು. ದೇಹವು ನಮ್ಮನ್ನು ಸುಖಿಗಳಾಗಿರಲು ಬಿಡುವುದಿಲ್ಲ.

ಅಕ್ಕಮಹಾದೇವಿಯವರು ಸಚಾರಚರವೇ ನೀನು ನಿಲ್ಲು ನಿಲ್ಲು ಎಂದು ಹೇಳುತ್ತಾರೆ. ಶರಣರು ಅಕ್ಕಮಹಾದೇವಿಯವರಿಗೆ ಸಮಯವಿಲ್ಲ. ಆ ಮುಖದಲ್ಲಿ ನಡೆದಿದ್ದಾರೆ. ಅವರು ಪರಮಾತ್ಮನಿಗೆ ಪತ್ರ ಮುಟ್ಟಿಸಿದ ಮೇಲೆ ಅಕ್ಕಮಹಾದೇವಿಯವರು ಪರಮಾತ್ಮನೇ ಆಗಿ ಬಿಡುತ್ತಾರೆ. ಕರ್ಪೂರ ಅಗ್ನಿಯ ಸಂಗಕ್ಕೆ ಹೋದಾಗ ಅಗ್ನಿಯೇ ಆಗಿ ಬಿಡುತ್ತದೆ. ಅಗ್ನಿಯಲ್ಲಿ ಅಡಗಿ ಬಿಡುತ್ತದೆ. ಪರಮಾತ್ಮನು ಅರಿಷಡ್ವರ್ಗಗಳಿಲ್ಲದವನು. ಅರಿಷಡ್ವರ್ಗಗಳನ್ನು ಕಳೆದುಕೊಂಡು ಅಕ್ಕಮಹಾದೇವಿಯವರು ಪರಮಾತ್ಮರೇ ಆದರು. ಅವರು ಪಡೆದುಕೊಂಡುದು ಇಂಥದೇ ಪೂರ್ಣತೆಯನ್ನು. ☐

**ಧರ್ಮಕೇಂದ್ರ – ಬಸವಕಲ್ಯಾಣ**
**ಧರ್ಮಕ್ಷೇತ್ರ – ಕೂಡಲಸಂಗಮ**

ಸಮಸ್ತ ಲಿಂಗವಂತ ಧರ್ಮೀಯರಿಗೆ ಪರಮಪವಿತ್ರವಾದ ಧರ್ಮಕೇಂದ್ರವೆಂದರೆ ಬಸವಕಲ್ಯಾಣ. ಧರ್ಮಕ್ಷೇತ್ರವೆಂದರೆ ಕೂಡಲಸಂಗಮ. ಅಕ್ಕಮಹಾದೇವಿಯು ಈ ಕುರಿತು ತಮ್ಮ ವಚನದಲ್ಲಿ ಹೇಳಿದ್ದಾರೆ.

*ಅಯ್ಯಾ ನಿಮ್ಮ ಶರಣರು ಮೆಟ್ಟಿದ ಧರೆ*
*ಪಾವನವಯ್ಯಾ*
*ಅಯ್ಯಾ ನಿಮ್ಮ ಶರಣರು ಇದ್ದ ಪುರವೇ*
*ಕೈಲಾಸವಯ್ಯಾ*
*ಅಯ್ಯಾ ನಿಮ್ಮ ಶರಣರು ನಿಂದುದೆ*
*ನಿಜನಿವಾಸವಯ್ಯಾ*
*ಚೆನ್ನಮಲ್ಲಿಕಾರ್ಜುನಯ್ಯಾ*
*ನಿಮ್ಮ ಶರಣ ಬಸವಣ್ಣ ನಿರ್ದ ಕ್ಷೇತ್ರವೇ*
*ಅವಿಮುಕ್ತ ಕ್ಷೇತ್ರವಾಗಿ*
*ಆನು ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ*
*ಎನುತಿರ್ದೆನು.*

ವಿಶ್ವಗುರು ಬಸವಣ್ಣನವರು ಮಾನವ ಕುಲದ ಕಲ್ಯಾಣಕ್ಕಾಗಿ, ಸಕಲ ಜೀವರಾಶಿಗಳ ಲೇಸಿಗಾಗಿ ಕಲ್ಯಾಣದಲ್ಲಿ ಅನುಭವ ಮಂಟಪ ಸ್ಥಾಪಿಸಿ, ತನ್ಮೂಲಕ ಲಿಂಗಾಯತ ಧರ್ಮವೆಂಬ ವಿನೂತನ ವಿಶ್ವಧರ್ಮವನ್ನು ಜಗತ್ತಿಗೆ ಕರುಣಿಸಿದರು. ದೇಶಾದ್ಯಂತದಿಂದ ಶರಣಚೇತನಗಳು ಆಗಮಿಸಿ ಕಾಯಕ–ದಾಸೋಹ–ಪ್ರಸಾದ ಜೀವನ ನಡೆಸಿದರು. ಇಂತಹ ಪವಿತ್ರ ಕ್ರಾಂತಿಯ ಧರ್ಮಕೇಂದ್ರ ಬಸವಕಲ್ಯಾಣ, ಕಲ್ಯಾಣಕ್ರಾಂತಿಯ ಸಂದರ್ಭದಲ್ಲಿ ಗಡಿಪಾರುಗೊಂಡು ಹೊರಹೊರಟ ಬಸವಣ್ಣನವರು ಕೂಡಲಸಂಗಮಕ್ಕೆ ಬಂದು, ಮಹಾಬಯಲಿನಲ್ಲಿ ಬಯಲಾದರು. ಧರ್ಮಗುರು ಬಯಲಾದ ಪವಿತ್ರ ಕ್ಷೇತ್ರವೇ ಇಂದು ಧರ್ಮಕ್ಷೇತ್ರವಾಗಿರುವ ಕೂಡಲಸಂಗಮ.

## 'ಅಲ್ಲಮಪ್ರಭುವನ್ನು ಕುರಿತು.....'

-ಶಕುಂತಲಾ ಯು. *

*"ಎತ್ತಣ ಮಾಮರ ಎತ್ತಣ ಕೋಗಿಲೆ?*
*ಎತ್ತಣಂದೆತ್ತ ಸಂಬಂಧವಯ್ಯಾ ?*
*ಬೆಟ್ಟದ ನೆಲ್ಲಿಕಾಯಿ ಸಮುದ್ರದೊಳಗಣ ಉಪ್ಪು*
*ಎತ್ತಣಿಂದೆತ್ತ ಸಂಬಂಧವಯ್ಯಾ ?*
*ಗುಹೇಶ್ವರಲಿಂಗಕ್ಕೆಯೂ ಎನಗೆಯೂ*
*ಎತ್ತಣಿಂದೆತ್ತ ಸಂಬಂಧವಯ್ಯಾ"*

ಅಲ್ಲಮ, ಅಲ್ಲಮಪ್ರಭು, ಪ್ರಭುದೇವ ಈ ಹೆಸರೇ ನಿಗೂಢ. ಅವನ ಚರಿತ್ರೆ ಇನ್ನೂ ಗೂಢ. ಶೂನ್ಯ ಸಿಂಹಾಸನದ ಪೀಠಾದೀಶ್ವರ. ಅಲ್ಲಮನ ಕುರಿತಾದ ಪುರಾಣಗಳು ಅನೇಕ. ಹರಿಹರನ 'ಪ್ರಭುದೇವರರಗಳೆ' ಚಾಮರಸನ ಪ್ರಭುಲಿಂಗ ಲೀಲೆ, ಪರ್ವತೇಶನ 'ಪ್ರಭುದೇವರ ಸಾಂಗತ್ಯ' ತ.ರಾ.ಸು. ಅವರು ಬರೆದ ಅಗ್ನಿರಥ ಮುಕ್ತಿಪಥ' ಕಾದಂಬರಿ, ಡಾ|| ಹೆಚ್. ತಿಪ್ಪೇರುದ್ರಸ್ವಾಮಿಯವರ 'ಪರಿಪೂರ್ಣದೆಡೆಗೆ' ಕಾದಂಬರಿ, ಶೂನ್ಯ ಸಂಪಾದನೆ ಮತ್ತು ವೀರಶೈವ ಪುರಾಣ ಕಾವ್ಯಗಳಲ್ಲಿ ಅಲ್ಲಮನ ಹಲವಾರು ಅನುಭಾವಿಕ ವಿಚಾರಗಳು ವ್ಯಕ್ತವಾಗಿವೆ. ಅಲ್ಲಮನ ಪೂರ್ವಾಪರದ ಬಗ್ಗೆ ನಿಖರವಾದ ಐತಿಹಾಸಿಕ ವಿವರ ದೊರೆತಿರುವುದಿಲ್ಲ. ನಿರಹಂಕಾರ ಸುಜ್ಞಾನದೇವಿಯರಿಗೆ ನಿರ್ಮಾಯ ಜನಿಸಿದನು. ಅಹಂಕಾರ ತ್ಯಾಗ, ಸುಜ್ಞಾನ ಪ್ರಾಪ್ತಿ ಫಲವಾಗಿ ಮಾಯಾ ರಹಿತ ಬಯಲಾಗುವ ನಿರ್ಮಾಯ. ಶಿಶು ಕಣ್ತೆರೆಯುವಾಗ ಲಿಂಗದಂ಼ಘ್ರಿಯಲ್ಲಿ ದೃಷ್ಟಿ ಇಟ್ಟು ದೇಹದ ಜಾಡ್ಯ ಜಂಜಾಟಗಳಿಗೆ ಅಂಟದೇ ಅವೆಲ್ಲವನ್ನು ತಾನು ಅಲ್ಲವೆನಿಸುವಷ್ಟು ಧೀರನು ಪ್ರಶಾಂತನು ಆಗಿ ಕಂಡದ್ದರಿಂದ ಶಿಶುವಿಗೆ 'ಅಲ್ಲಮ'ಎಂದು ನಾಮಕರಣ ಮಾಡಿದರು.

ತಂದೆಯೊಡನೆ ಅಲ್ಲಮ ದೇವಾಲಯಕ್ಕೆ ಹೋದಾಗ ಅಲ್ಲಿರುವ ದೇವರು ಈ ದೇಹದಲ್ಲಿ ಏಕೆ ಇರಬಾರದು? ಎಂದು ಪ್ರಶ್ನಿಸಿ ಸರ್ವವ್ಯಾಪಿಯಾದ ಈ ದೇಹದಲ್ಲಿಯೂ ನಮ್ಮೊಡನೆ ಇರಲಿಕ್ಕೇ ಬೇಕು ಎಂದು ನಿರ್ಧರಿಸಿ 'ದೇವನ ಅರಿವು' ಬಗ್ಗೆ ಚಿಂತಿಸಲಿಕ್ಕೆ ಪ್ರಾರಂಭಿಸಿದನು. ಹರಿಹರನ ಪ್ರಕಾರ ಮದ್ದಳೆಗಾರನಾದ ಈತ ಕಾಮಲತೆಯನ್ನು ಪ್ರೀತಿಸಿ, ಸಂಸಾರ ಮಾಡಿ, ಜ್ವರ ಬಂದು ಅವಳು ತೀರಿದ ನಂತರ, ವಿರಕ್ತಿಯನ್ನು ಹೊಂದಿ ಭೂಗರ್ಭದ ಶಿವಾಲಯದಲ್ಲಿದ್ದ ಅನಿಮಿಷ ಯೋಗಿಯಿಂದ ಸಾಕ್ಷಾತ್ಕಾರ ಹೊಂದಿದನು. ನಂತರ ಎಷ್ಟೋ ಕಾಲ ಅರಣ್ಯ ವಾಸಿಯಾಗಿದ್ದು, ಯೋಗಿಗಳನ್ನು ತಪಸ್ವಿಗಳನ್ನು ದರ್ಶಿಸಿ, ಯೋಗಸಾಧನೆಯ ಸಿದ್ಧಿ ಪರಿಪೂರ್ಣತೆ ಸಂಕಲ್ಪಸಿದ್ಧಿ ಹೇಗೆ ಪಡೆದನು ಎಂಬುದು ನಿಗೂಢ.

ನಾನೆಂಬ ಅಹಂಕಾರದಲ್ಲಿ ನಾನುಂಡೆನಾದರೆ ನನಗದೇ ಭಂಗ. ಸ್ತುತಿನಿಂದೆಗೆ ನೊಂದೆನಾದ್ದೊಡೆ ಅಂಗೈಯಲ್ಲಿರ್ಪ ಗುಹೇಶ್ವರ ಲಿಂಗಕ್ಕೆ ದೂರ' ಎಂದು ಹೇಳುವಲ್ಲಿ ಅದ್ವಿತೀಯ ವಾದ ದಿವ್ಯಶಕ್ತಿ. ಮಹಾಚೇತನ ಪರಿಪೂರ್ಣ ವ್ಯಕ್ತಿ ಎಂಬ ಅರಿವು ಉಂಟಾಗುವುದು.

ವೈಚಾರಿಕ ತತ್ವ ಆಧಾರದ ಅನುಭವ ಮಂಟಪದ ಪ್ರಥಮ ಅಧ್ಯಕ್ಷರಾಗಿ ಮಾನವ ಸಮಾಜದ ಸರ್ವಾಂಗೀಣ ಅಭಿವೃದ್ಧಿಗೆ ಚಾಲನೆ ನೀಡಿದವರು ಅಲ್ಲಮ. ಜ್ಞಾನ ವೈರಾಗ್ಯ ತತ್ವ ಮೌಲ್ಯಗಳಿಗೆ ಸಾಕ್ಷಿ.

ಷಟ್‌ಸ್ಥಲಗಳ ಬಗ್ಗೆ ಅಲ್ಲಮನ ಈ ವಚನ ಅದರ ಸಾರವನ್ನು ಹೇಳುತ್ತದೆ.

*ವಿಶ್ವಾಸದಿಂದ ಭಕ್ತನಾಗಿ ಆ ವಿಶ್ವಾಸದೊಳಗಣ ನಿಷ್ಠೆಯಿಂ*
*ಮಾಹೇಶ್ವರನಾಗಿ*
*ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ*
*ಆ ಸಾವಧಾನದೊಳಗಣ ಸ್ವಾನುಭವದಿಂ ಪ್ರಾಣಲಿಂಗಿಯಾಗಿ*
*ಆ ಸ್ವಾನುಭಾವದೊಳಗಣ ಅರಿವಿನಿಂ ಶರಣನಾಗಿ*
*ಆ ಅರಿವು ನಿಜದಲ್ಲಿ ಸಮರಸ, ಭಾವನೈದಿದ ನಿರ್ಭಾವ*
*ಪದದೊಳು*
*ನಿಂದ ಭೇದವೇ ಐಕ್ಯ ಸ್ಥಲ ಕಾಣಾ ಗುಹೇಶ್ವರ*

* 'ಜ್ಯೋತಿರ್ಲಿಂಗ', ಶಿವಮೊಗ್ಗ ರಸ್ತೆ, ಒಂದನೇ ತಿರುವು, ಹೈಸ್ಕೂಲ್ ಬಡಾವಣೆ, ಹೊನ್ನಾಳಿ-577 217, ದಾವಣಗೆರೆ ಜಿಲ್ಲೆ.





ವಿಶ್ವಾಸ, ನಿಷ್ಠೆ ಸಾವಧಾನ, ಸ್ವಾನುಭವ, ಅರಿವು ಇವುಗಳಿಂದ ವಿಕಾಸವಾದ ಸಾಧಕ ಸಮರಸದಿಂದ ನಿರ್ಭಾವ ಸ್ಥಿತಿಗೆ ನಿಲ್ಲುತ್ತಾನೆ. ಇದು ಅನುಭಾವದ ಕೊನೆ ನಿಲುವು. ದೇಹದ ಬಗ್ಗೆ-

*ಕಾಲುಗಳೆರಡು ಗಾಲಿ ಕಂಡಯ್ಯ*
*ದೇಹ ಎಂಬುದು ತುಂಬಿದ ಬಂಡಿ ಕಂಡಯ್ಯ*
*ಬಂಡಿಯ ಹೊಡೆವವರು ಐವರು ಮಾನಿಸರು*
*ಒಬ್ಬರಿಗೊಬ್ಬರು ಸಮವಿಲ್ಲಯ್ಯ*
*ಅವರಿಚ್ಚೆಯನರಿದು ಹೊಡೆಯದಿದ್ದರೆ*
*ಅದರಚ್ಚು ಮುರಿಯಿತ್ತು ಗುಹೇಶ್ವರ.*

ದೇಹ ಎನ್ನುವ ಬಂಡಿಯನ್ನು ಪಂಚೇಂದ್ರಿಯಗಳೂ ನಡೆಸುತ್ತವೆ. ಈ ಐದು ಸಮಾನ ಜವಾಬ್ದಾರಿ ಇದ್ದರೆ (ನಿಯಂತ್ರಣದಲ್ಲಿದ್ದರೆ) ದೇಹ ಸುಸ್ಥಿತಿಯಲ್ಲಿರುತ್ತದೆ. ಮಾತು ಸಾಮಾನ್ಯವಲ್ಲ ಎಂಬುದರ

*'ಮಾತೆಂಬುದು ಜ್ಯೋತಿರ್ಲಿಂಗ ಸ್ವರವೆಂಬುದು ಪರತತ್ವ*
*ತಾಳೋಷ್ಠ ಸಂಪುಟವೆಂಬುದೇ ನಾದಬಿಂದುಕಳಾತೀತ*
*ಗುಹೇಶ್ವರನ ಶರಣರು ನುಡಿದೂ ಸೂತಕಿಗಳಲ್ಲ'*

ಮಾತು ಪರಿಶುದ್ಧಭಾವವಾಗಿರಬೇಕು. ನಿಷ್ಕಾರಣಮಾತು ಬೇಡ. ಹೆಚ್ಚು ಕುಂದು ಮಾತಿನಲ್ಲಿರಬಾರದು. ನುಡಿಯು ಹಾಗೆ ಇರಬಾರದು. ಸ್ಪಷ್ಟವಾಗಿರಬೇಕು. ಮತ್ತೊಬ್ಬರಿಗೆ ಬೆಳಕು ಆಗಬೇಕು.

ಗುರುಶಿಷ್ಯ ಸಂಬಂಧದ ಬಗ್ಗೆ -

*ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ*
*ಬಡಿದು ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದ*
*ವೆಂದಡೆನಯ್ಯಾ*
*ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ*
*ಬೈದು ಬುದ್ಧಿಯ ಕಲಿಸಿದರೆ ಆಗಲಿ*
*ಮಹಾಪ್ರಸಾದವೆಂದೆನಯ್ಯಾ*
*ದ್ವಾಪರದಲಿ ಶ್ರೀ ಗುರುಶಿಷ್ಯಂಗೆ*
*ಝುಂಕಿಸಿ ಬುದ್ಧಿಯ ಕಲಿಸಿದರೆ ಆಗಲಿ*
*ಮಹಾಪ್ರಸಾದವೆಂದೆನಯ್ಯಾ*
*ಕಲಿಯುಗದಲಿ ಶ್ರೀಗುರುಶಿಷ್ಯಂಗೆ*
*ವಂದಿಸಿ ಬುದ್ಧಿಯ ಕಲಿಸಿದರೆ ಆಗಲಿ*
*ಮಹಾಪ್ರಸಾದವೆಂದೆನಯ್ಯಾ*
*ಗುಹೇಶ್ವರ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ*
*ನಾನು ಬೆರಗಾದೆನು.*

ಆಗ ಅಲ್ಲಮಪ್ರಭುದೇವರು ಹೇಳಿದ ಮಾತುಗಳು ಇಂದಿಗೂ ಅನ್ವಯವಾಗುತ್ತವೆ.

ಅರಿವೆಂಬ ಅಲಗು ಕತ್ತರಿಸುವ ಅನುಭಾವದ ಅಸ್ತ್ರ, ಸಾಧಕರನ್ನು ಸತ್ವಪರೀಕ್ಷೆಗೆ ಒಡ್ಡುತ್ತದೆ. ಅರಿವು ಅರಿದರಿದು ಮರೆದ ಪರಿಯಂತಯ್ಯ ಎಂಬ ಸಿದ್ಧರಾಮನ ಪ್ರಶ್ನೆಗೆ ಅಲ್ಲಮ ಈ ರೀತಿ ಉತ್ತರಿಸಿದ್ದಾರೆ-

**'ಅರಿದೆನೆಂಬುದು ತಾ ಬಯಲು, ಅರಿಯನೆಂಬುದೂ**
**ತಾ ಬಯಲು, ಮರೆದೆನೆಂಬುದು ತಾ ಬಯಲು,**
**ಮರೆಯನೆಂಬುದೂ ತಾ ಬಯಲು ಅರುಹಿನ**
**ಕುರಿಹಿನ ಮರಹಿನೊಳಗೆ ಗೊಹೇಶ್ವರನೆಂಬುದು ತಾ**
**ಬಯಲು ನೋಡಾ'**

ಅರಿವು ತನ್ನ ನಿಷ್ಕಲ್ಮಶ ನೆಲೆಯಲ್ಲಿ ತಾನೇ ಬಯಲಾಗುತ್ತದೆ. ತಾನೇ ಶೂನ್ಯವಾಗುತ್ತದೆ. ಅಲ್ಲಮನ ಅರಿವಿನಲಗು ಎಲ್ಲರ ಅಹಂಕಾರವನ್ನು ಹೊಡೆದು ಅವರನ್ನು ಅಹಂಕಾರದ ಪಂಜರದಿಂದ ಬಿಡುಗಡೆಗೊಳಿಸುತ್ತದೆ.

ಜ್ಞಾನದ ಬಗ್ಗೆ ಅಲ್ಲಮರು-

'ಹೇಮ ನಿನ್ನದಲ್ಲ ಭೂಮಿ ನಿನ್ನದಲ್ಲ
ಕಾಮಿನಿ ನಿನ್ನವಳಲ್ಲ ಇದು ಜಗಕಿಕ್ಕಿದ ವಿಧಿ
ನಿನ್ನ ಒಡವೆಯೆಂಬುದು ಜ್ಞಾನರತ್ನ
ಅಂತಪ್ರಜ್ಞಾರತ್ನವ ಕೆಡೆಗುಡದೆ ನೀನಲಂಕರಿಸಿದೆಯಾದಡೆ
ನಮ್ಮ ಗುಹೇಶ್ವರ ಲಿಂಗದಲ್ಲಿ ನಿನ್ನಿಂದ ಬಿಟ್ಟು
ಸಿರಿವಂತರಿಲ್ಲ ಕಾಣಾ ಎಲೆ ಮನವೆ.

ಬಸವಣ್ಣನವರ ೧೪೦೦ ವಚನಗಳಲ್ಲಿ ಪ್ರಭುದೇವರ ಕುರಿತು ೧೧೮ ವಚನಗಳಿವೆ.

*ಅಜ್ಞಾನ ಹಿಂಗಿತ್ತು ಅಹಂಕಾರವಡಗಿತ್ತು*
*ಅರಿಷಡ್ವರ್ಗಗಳು ಹರಿದು ಹಂಚಿದವು*
*ಅಷ್ಟಮದಂಗಳು ಪಟ್ಟ ಪರಿಯಾದವು*
*ದಶವಾಯುಗಳು ವಶವರ್ತಿಯಾದವು*
*ಇಂದ್ರಿಯಗಳು ಬಂಧನವಡೆದವು*
*ಮನೋವಿಕಾಸ ನಿಂದಿತ್ತು ಕೂಡಲಸಂಗಮದೇವ*
*ನಿಮ್ಮಲ್ಲಿ ನಮ್ಮ ಮಹಾದೇವಿಯಕ್ಕಗಳ ನಿರ್ವಾಣದ*
*ಸಹಚರ ನಿಲವ ಕಂಡು ನಮೋ ನಮೋ*

ಎನುತಿರ್ದೆಯಯ್ಯ ಪ್ರಭುವೆ'

ಅಕ್ಕಮಹಾದೇವಿಯದು ಬಯಲಸುಟ್ಟ ದಿಗಂಬರ ಸ್ಥಿತಿ. ಪ್ರಭುದೇವರದು ದೇಹವೇ ಬಯಲಾದ ಸ್ಥಿತಿ. ದೇಹದ ಗುಣಗಳು ಅಜ್ಞಾನ ಅಹಂಕಾರ ಅರಿಷಡ್ವರ್ಗ ಕಾರಣವಾಗಿ ಮರೆವು ಬರುವುದು. ದೇಹವು ನಾನು ಎಂಬುದನ್ನು ಸ್ಥಾಪಿಸುವುದು. ದೇಹವು ಕಾಮಾದಿ ಸುಖಭೋಗ ಅನುಭವಿಸಲು ತೊಡಗುವುದು. ಈ ದೇಹ ಗುಣ ದಾಟಿ ನಿರ್ದೇಹದ ಗುಣಗಳಲ್ಲಿ ಪ್ರಭುದೇವರು ಬಾಳಿದರು.

*'ಧರೆಯಾಕಾಶದ ನಡುವೆ ಒಂದು ಮಾಮರ ಹುಟ್ಟಿತ್ತು*
*ಆ ಮರಕ್ಕೆ ಕೊಂಬೆ ಎರಡು, ಎಲೆ ಮೂರು*
*ಮೂವತ್ತಾರ ಪುಷ್ಪ ಕಾಯಿ ಒಂದೇ*
*ಹಣ್ಣು ರಸ ತುಂಬುದಲಿ ಏನನೂ ಕಾಣೆ*
*ಎಲೆ ಉದುರಿದಡೆ ಹಣ್ಣು ತೊಟ್ಟು ಬಿಟ್ಟು ಬಿದ್ದಿತ್ತು*
*ಆ ಹಣ್ಣ ಪ್ರಭುದೇವರು ಆರೋಗಣೆಯ ಮಾಡಿ*
*ನಿಜದಲ್ಲಿ ನಿರ್ವಲಯರಾದರು*
*ಪ್ರಭುವಿನ ಕಾರುಣ್ಯ ಪ್ರಸಾದವ ನಾನು ಕೊಂಡೆನಾಗಿ*
*ಕೂಡಲಸಂಗಮದೇವರು ಇತ್ತ ಬಾರೆಂದು*
*ತಮ್ಮ ಹೃದಯ ಕಮಲದಲ್ಲಿ ಇಂಬಿಟ್ಟುಕೊಂಡರು'*

ಪ್ರಭುದೇವರು ಶ್ರೀಶೈಲದ ಕದಳಿವನದಲ್ಲಿ ಲಿಂಗಧ್ಯಾನಾರೂಢನಾಗಿ ಬಯಲಾದುದನ್ನು ಇಲ್ಲಿ ಇಷ್ಟಲಿಂಗದಲ್ಲಿ ಬಸವಣ್ಣನವರು ದರ್ಶನ ಹೊಂದಿ ಕಪ್ಪಡಿಯಲಿ ಲಿಂಗಪೂಜೆಯಲ್ಲಿದ್ದಂತೆ ಬಸವಣ್ಣನವರೂ ಧ್ಯಾನಾರೂಢರಾಗಿ ಬಯಲಾದರು ಎಂಬ ಅಭಿಪ್ರಾಯವೂ ಇದೆ. (ಡಾ॥ವಿಜಯಕುಮಾರ ಮಹಾನುಭಾವಿಗಳು)

*'ಬಯಲು ಬಯಲನೇ ಬಿತ್ತಿ*
*ಬಯಲು ಬಯಲನೇ ಬೆಳೆದು*
*ಬಯಲು ಬಯಲಾಗಿ ಬಯಲಾಯಿತ್ತಯ್ಯ*
*ಬಯಲು ಜೀವನ ಬಯಲು ಭಾವನೆ*
*ಬಯಲು ಬಯಲಾಗಿ ಬಯಲಾಯಿತ್ತಯ್ಯ*
*ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು*
*ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರ'*

ಅಧ್ಯಾತ್ಮದ ಪರಿಪೂರ್ಣತೆಯ ಬಯಲು ಆನಂದದ ಕ್ಷಣಗಳನ್ನು ಶ್ರೀಶೈಲದಲ್ಲಿ ಕಳೆದ ಅಲ್ಲಮರು ಮನದ ನಿರ್ಮುಕ್ತತೆಯ ಬಯಲು ಆನಂದದಲ್ಲಿ ಲೀನವಾದರು. ☐

## ವಚನಗಳು

ತನುವ ತೋಟವ ಮಾಡಿ, ಮನವ ಗುದ್ದಲಿ ಮಾಡಿ
ಅಗೆದು ಕಳೆದನಯ್ಯಾ ಭ್ರಾಂತಿಯ ಬೇರೊಡೆದು
ಸಂಸಾರದ ಹೆಂಟೆಯ ಒಗಿದು,
ಬಿತ್ತಿದೆನಯ್ಯ ಬ್ರಹ್ಮಬೀಜವ
ಅಖಂಡಮಂಡಲವೆಂಬ ಬಾವಿ, ಪವನವೇ ರಾಟಾಳ,
ಸುಷುಮ್ನನಾಳದಿಂದವೆ ಉದಕವ ತಿದ್ದಿ,
ಬಸವಗಳೈವರು ಹಸಗೆಡಿಸಿಹರೆಂದು
ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ
ಆವಾಗಲೂ ಈ ತೋಟದೊಳಗೆ ಜಾಗರವಿದ್ದು
ಈ ಸಸಿಯ ಸಲಹಿದೆ ಕಾಣಾ ಗುಹೇಶ್ವರಾ.

* * *

ಆಸೆಗೆ ಸತ್ತುದು ಕೋಟಿ, ಆಮಿಷಕ್ಕೆ ಸತ್ತುದು ಕೋಟಿ
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ,
ಗುಹೇಶ್ವರಾ, ನಿಮಗಾಗಿ ಸತ್ತವರನಾರನೂ ಕಾಣೆ.

* * *

ಶಿವಶರಣನು ನಿದ್ದೆಗೈದಡೆ ಜಪ ಕಾಣಿರಣ್ಣ !
ಶಿವಶರಣನು ಎದ್ದಿದ್ದರೆ ಶಿವರಾತ್ರಿ ಕಾಣಿರಣ್ಣ !
ಶಿವಶರಣನು ನೋಡಿದಡೆ ಪಾಪಕ್ಷಯ ಕಾಣಿರಣ್ಣ !
ಶಿವಶರಣನು ನಡೆದುದೆ ಪಾವನ ಕಾಣಿರಣ್ಣ !
ಶಿವಶರಣನು ನುಡಿದುದೇ ಶಿವತತ್ತ್ವ ಶಿವಮಂತ್ರ ಕಾಣಿರಣ್ಣ !
ಶಿವಶರಣನ ಮನವೇ ಲಿಂಗ ಕಾಣಿರಣ್ಣ !
ಶಿವಶರಣನ ಕಾಯವೇ ಕೈಲಾಸ ಕಾಣಿರಣ್ಣ !
ಗುಹೇಶ್ವರಾ, ನಿಮ್ಮ ಶರಣನ ಚಾರಿತ್ರವು ವಿಪರೀತವು.

* * *

ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ.

–ಅಲ್ಲಮಪ್ರಭು





# ಭಕ್ತಿ ಭಂಡಾರಿ ಬಸವಣ್ಣನವರು

–ಶ್ರೀಮತಿ ಬಿ.ಎಸ್. ಗಂಗನಳ್ಳಿ *

ಭಾರತದ ಇತಿಹಾಸದಲ್ಲಿ 12ನೆಯ ಶತಮಾನ ಸರ್ವದೃಷ್ಟಿಯಿಂದಲೂ ಕ್ರಾಂತಿಕಾರಿ ಚಳುವಳಿಯನ್ನು ಹಚ್ಚಿಸಿದ ಕಾಲ. ವಸ್ತು, ರೂಪ, ಭಾಷೆ ಇತ್ಯಾದಿಯಾಗಿ ಏಕಕಾಲಕ್ಕೆ ಬುಗಿಲೆದ್ದ ಚಳುವಳಿ. ಸಮಾಜದ ಏಳಿಗೆಗಾಗಿ ಒಬ್ಬ ಮಹಾನ್ ಚಿಂತಕ ಆಲೋಚಿಸಿದ ರೀತಿ ಅನನ್ಯವಾದುದು. ಆಧ್ಯಾತ್ಮ, ಜಗತ್ತು, ಪ್ರಪಂಚ, ಪಾರಮಾರ್ಥ, ವ್ಯಷ್ಟಿ, ಸಮಷ್ಟಿ, ನಡೆ–ನುಡಿ, ಅಂತರಂಗ–ಬಹಿರಂಗ ಹೀಗೆ ವಿವಿಧತೆಯಲ್ಲಿ ಏಕತೆಯನ್ನು, ಸಾಮರಸ್ಯವನ್ನು ಸಾಧಿಸಿದವನು ಭಕ್ತಿ ಭಂಡಾರಿ ಬಸವಣ್ಣನವರು.

ಭಾರತದಲ್ಲಿ ಜಾತಿ ಪದ್ಧತಿ, ಮೂಢನಂಬಿಕೆ, ಕಂದಾಚಾರ ತಾಂಡವವಾಡುತ್ತಿದ್ದ ಕಾಲದಲ್ಲಿ ಭಕ್ತಿಯ ಹಣತೆಯನ್ನು ಬೆಳಗಿಸಿದ ಬಸವಣ್ಣನವರ ಕಾರ್ಯ ಶ್ಲಾಘನೀಯವಾದುದು. ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿ ಅವನ ಅಧೀನಕ್ಕೊಳಪಡದೇ, ರಾಜಪ್ರಭುತ್ವವನ್ನು ಧಿಕ್ಕರಿಸಿದ ಅವರ ಅಂತರಾತ್ಮ ಸಮಾಜಮುಖಿಯಾಗಿ, ಸಮಾಜ ಹಿತವನ್ನು, ಲೋಕಕಲ್ಯಾಣವನ್ನು ಬಯಸಿತು. ಸ್ವಾತಂತ್ರ್ಯ ಸಮಾನತೆ, ಆಧ್ಯಾತ್ಮ ಸಾಧನೆ, ತತ್ವಬೋಧನೆ ಇವೇ ಮೊದಲಾದುವು ಅವರ ವಿಚಾರಾಂದೋಲನದ ಮೂಲಮಂತ್ರಗಳಾದುವು.

ಬಸವಣ್ಣನವರು ಕೇವಲ ತತ್ವಬೋಧಕರಾಗಿರಲಿಲ್ಲ. ಸ್ವತಃ ತಾವು ತಮ್ಮ ಜೀವನದಲ್ಲಿ ತತ್ವಗಳನ್ನು ಅಳವಡಿಸಿಕೊಂಡು ನುಡಿಯಲ್ಲಿ ನಡೆಯನ್ನು ಪೂರೈಸಿದವರು. ಸಂಸಾರದಲ್ಲಿದ್ದುಕೊಂಡು ಪಾರಮಾರ್ಥವನ್ನು ಸಾಧಿಸುವುದು ಕಷ್ಟಕರ. ಹಾಗೆಯೇ ಬಸವಣ್ಣನವರು ತಮ್ಮ ಮನಸ್ಸನ್ನು ನಿಯಂತ್ರಿಸುವಲ್ಲಿ ತಮಗಾದ ಕಷ್ಟಗಳನ್ನು ತೊಂದರೆಗಳನ್ನು ಅನುಭವಗಳನ್ನು ವಚನಗಳ ಮೂಲಕ ನಿರಹಂಕಾರ ಮನೋಭಾವದಿಂದ ಹೇಳಿಕೊಂಡಿದ್ದಾರೆ. ಮನಸ್ಸನ್ನು ಗ್ರಹಿಸಿ ಅದೊಂದು 'ಮರ್ಕಟ', 'ಸಂಸಾರ ಗಾಳಿಯ ಸೊಡರು' ಎಂದು ಹೇಳುತ್ತಾ, 'ಸಂಸಾರ ಬಲೆಯಲ್ಲಿ ಸಿಲುಕಿದೆನಯ್ಯಾ, ಎನ್ನವನು ಕಾಯಯ್ಯಾ, ಕಾಯಯ್ಯಾ', ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ, ವಿಚಾರಿಸಿದರೆ ಹುರುಳಿಲ್ಲವಯ್ಯಾ ಎಂದು ನಿವೇದಿಸಿಕೊಂಡಿದ್ದಾರೆ. ಹಾಗೆಯೇ ಮಾವಿನಕಾಯಿಯೊಳಗೊಂದು ಎಕ್ಕೆಕಾಯಿ ನಾನಯ್ಯ' 'ನರವಿಂದ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ ಶಿವಶಿವಾ ಎಂದೋದಿಸಯ್ಯಾ ಕೂಡಲಸಂಗಮದೇವಾ ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' 'ತಂದೆ ನೀನು ತಾಯಿ ನೀನು, ಬಂಧು ನೀನು, ಬಳಗ ನೀನು ಎನಗೆ ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವಾ' ಎನ್ನ ವಾಮಕ್ಷೇಮ ನಿಮ್ಮದಯ್ಯಾ' ಹೀಗೆ ಹಲವಾರು ವಚನಗಳಲ್ಲಿ ಅವರ ಆತ್ಮನಿವೇದನೆ ವ್ಯಕ್ತವಾಗಿದೆ.

ಪರಿಪೂರ್ಣವಾದ ಪಕ್ವಗೊಂಡ ಮನದಾಳದ ಮಾತುಗಳು ಹೀಗೆ ಹೊರಹೊಮ್ಮಿವೆ. 'ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೇ ಬರಲಿ, 'ಇದಕಾರಂಜುವರು, ಇದಕಾರಳುಕುವರು, ಜಾತಸ್ಯ ಮರಣಂ ಧ್ರುವಂ' 'ಮರಣವೇ ಮಹಾನವಮಿ' ಎಂದು ಭಾವಿಸಿದ ಅವರು ಜನನ ಮರಣಗಳ ನಡುವಿನ ಜೀವನಕ್ಕೆ ಅಂದರೆ ಅರ್ಥವತ್ತಾದ ಬದುಕಿಗೆ ಮಹತ್ವಕೊಟ್ಟರು.

ಷಟ್‌ಸ್ಥಲಗಳ ಮಹಿಮೆ ಅರಿತು ಶರಣಸ್ಥಲಕ್ಕೆ ಬಂದಾಗ 'ಜೋಳವಾಳಿಯ ನಾನಲ್ಲ. ವೇಳೆ ವಾಳಿಯು ನಾನಲ್ಲ, ಹಾಳುಗೆಟ್ಟೋಡುವ ಆಳು ನಾನಲ್ಲವಯ್ಯ' ನ್ಯಾಯನಿಷ್ಠುರಿ ದಾಕ್ಷಿಣ್ಯಪರ ನಾನಲ್ಲ' ಎಂಬ ದಿಟ್ಟತನವಿದೆ. ಬಿಜ್ಜಳನ ಹಂಗು ತಮಗಿಲ್ಲ ಎನ್ನುವುದನ್ನು 'ಊರ ಮುಂದೆ ಹಾಲಹಳ್ಳ ಹರಿಯುತ್ತಿರಲು ಓರೆಯಾವಿನ ಬೆನ್ನಲ್ಲಿ ಹರಿಯಲದೇಕಯ್ಯ ಕೂಡಲಸಂಗಯ್ಯನುಳ್ಳನ್ನಕ್ಕ, ಬಿಜ್ಜಳನ ಭಂಡಾರವೆನಗೇಕಯ್ಯ' 'ಆರು ಮುನಿದು ನಮ್ಮಗೇನು ಮಾಡುವರು ಊರು ಮುನಿದು ನಮ್ಮನೆಂತು ಮಾಡುವುದು'. ಹೀಗೆ ಜನನಿಂದೆಯನ್ನು ಸಹಿಸಿದ ಅವರು ಅದಕ್ಕೇ ತನ್ನ ಉತ್ತರವನ್ನು

* ಕೆ.ಬಿ.ಎಂ.ಪಿ.ಎಸ್., ಚರ್ಚಿನಕಲ್ಲ ಅಂಚೆ, ಮುದ್ದೇಬಿಹಾಳ, ಬಿಜಾಪುರ ಜಿಲ್ಲೆ.

ಕೊಟ್ಟಿದ್ದಾರೆ. ಭಕ್ತಿಯ ಕಣಜವೇ ಆದ ಬಸವಣ್ಣನವರು ಕಿಂಕರತ್ವದಲ್ಲಿ ಶಂಕರನನ್ನು ಕಂಡವರು. 'ಭಕ್ತಿಯಿಲ್ಲದ ಬಡವ ನಾನಯ್ಯ ಕಕ್ಕಯ್ಯನ ಮನೆಯಲು ಬೇಡಿದೆ, ಚನ್ನಯ್ಯನ ಮನೆಯಲು ಬೇಡಿದೆ, ದಾಸಯ್ಯನ ಮನೆಯಲು ಬೇಡಿದೆ ಎಲ್ಲ ಪುರಾತನರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ' ಭಕ್ತಿ ಸುಭಾಷೆಯ ನುಡಿವೆ, ನುಡಿದಂತೆ ನಡೆವೆ, ನಡೆಯೊಳಗೆ ನುಡಿಯ ಪೂರ್ಯೆಸುವೆ'. ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ ಒಂದು ಜವೆ ಕೊರತೆಯಾದರೆ ಎನ್ನನದ್ದೀ ನೀನೆದ್ದು ಹೋಗು ಕೂಡಲಸಂಗಮದೇವಾ' ಇಂಥ ಸಂದರ್ಭಗಳು ಬಸವಣ್ಣನವರ ನಿಷ್ಠಾಭಕ್ತಿಯನ್ನು ಹೇಳುತ್ತವೆ.

ದೇವ ಮತ್ತು ಭಕ್ತನ ಸಂಬಂಧ ಅದು ಅವಿನಾಭಾವ ಸಂಬಂಧ ಆದರೂ ಭಕ್ತನನ್ನು ಹಲವು ವಿಧಗಳಲ್ಲಿ ದೇವರು ಪರೀಕ್ಷಿಸುತ್ತಾನೆ. ಎಂಥ ಪರೀಕ್ಷೆಗಳು ಬಂದರೂ ಎದುರಿಸುವಲ್ಲಿ ಭಕ್ತ ಸಿದ್ಧನಿರುತ್ತಾನೆ. ಕೆಲವು ಸಲ ಬಸವಣ್ಣ ನವರ ಅಳಲು ಹೀಗೆ ವ್ಯಕ್ತವಾಗಿದೆ. 'ಅಕಟಕಟ ಶಿವ ನಿನಗಿನಿತು ಕರುಣವಿಲ್ಲ ಅಕಟಕಟ ಶಿವನಿನಗಿನಿತು ಕೃಪೆಯಿಲ್ಲ, ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ ಪರಲೋಕ ದೂರನ? ಏಕೆ ಹುಟ್ಟಿಸಿದೆ ಕೂಡಲ ಸಂಗಮ ದೇವಯ್ಯ' ಎಂದು ಹೇಳಿಕೊಂಡಿದ್ದಾರೆ.

ಏನೊಂದೂ ಬೇಡದ, ಯಾವುದಕ್ಕೂ ಆಸೆಪಡದ ಯಾವ ಪದವಿಗೂ ಹಾತೊರೆಯದ ನಿಸ್ವಾರ್ಥ ನಿರ್ಮಲ ಮನಸ್ಸು ಅವರದು. 'ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದೊಡೆ ಎತ್ತಿದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ', 'ಬ್ರಹ್ಮಪದವಿ ಯನೊಲ್ಲೆ, ವಿಷ್ಣು ಪದವಿಯನೊಲ್ಲೆ, ರುದ್ರಪದವಿಯನೊಲ್ಲೆ ನಾನು ಮತ್ತಾವ ಪದವಿಯನೊಲ್ಲೆನಯ್ಯ ಕೂಡಲಸಂಗಮ ದೇವಾ ನಿಮ್ಮ ಸದ್ಭಕ್ತರ ಮಹಾಪದವಿಯನೆ ಕರುಣಿಸಯ್ಯಾ' –ಎನ್ನುವಲ್ಲಿ ನಿಶ್ಚಲತೆ ಇದೆ. ಭಕ್ತ ಮತ್ತು ಭಕ್ತಿಯ ಮಹಿಮೆಯನ್ನು–'ಭಕ್ತಿಯೆಂಬುದ ಮಾಡಬಾರದು, ಕರಗಸ ದಂತೆ ಹೋಗುತ್ತ ಕೊರೆದು ಬರುತ್ತ ಕೊಯ್ವುದು. 'ಭಕ್ತಿಯೆಂಬುದು ಶಿವನ ನಡುಗಿಸಿತ್ತು, ಭಕ್ತಿ ಶಿವನ ಹಾಡಿಸಿ ಕುಣಿದಾಡಿಸಿತ್ತು'. 'ಕೊಲುವೆನೆಂಬ ಭಾಷೆ ದೇವನದು, ಗೆಲುವೆನೆಂಬ ಭಾಷೆ ಭಕ್ತನದು ಎಂಬುದನ್ನು ಲೋಕಕ್ಕೆ ಅರುಹಿಕೊಟ್ಟರು.

ಬಸವಣ್ಣನವರು ವೈಯಕ್ತಿಕ ಏಳಿಗೆಯನ್ನು ಮಾತ್ರ ಬಯಸದೇ ಸಮಾಜದ ಏಳ್ಗೆಯನ್ನು ಬಯಸಿದವರು. ಸಮಾಜದ ಒಳಿತು–ಕೆಡುಕುಗಳನ್ನು ಆಲೋಚಿಸಿ ಸಮಾಜದ ಪರಿವರ್ತನೆಯಲ್ಲಿ ತೊಡಗಿದವರು. ಸಮಾಜ ಪರಿವರ್ತನೆ ಬಯಸಿದ ಅವರು ಕೆಲವೊಂದು ಸಂದರ್ಭಗಳಲ್ಲಿ ಡಾಂಭಿಕ ಜನರ ಕುರಿತು–ಮೂಢನಂಬಿಕೆಯನ್ನು ಆಚರಿಸುವುವವರನ್ನು ಕುರಿತು ತರಾಟೆಗೆ ತೆಗೆದುಕೊಂಡಿದ್ದಾರೆ. ವೇಷಡಂಭಕರನ್ನು ಕಂಡು–ಕಳ್ಳಗಂಜಿ ಕಾಡಹೊಕ್ಕರೆ ಹುಲಿತಿಂಬುದ ಮಾಬುದೇ? ಕಾಲಕ್ಕಂಜಿ ಭಕ್ತನಾದೊಡೆ ಕರ್ಮಲೆಂಬುದ ಮಾಬುದೆ? ಹುತ್ತವ ಬಡಿದರೆ ಹಾವು ಸಾಯಬಲ್ಲುದೆ ಅಯ್ಯ, ಅಘೋರ ತಪವ ಮಾಡಿದಡೇನು ಅಂತರಂಗ–ಬಹಿರಂಗ ಶುದ್ಧಿಯಿಲ್ಲದವನೆಂತು ನಂಬುವನಯ್ಯ ಕೂಡಲ ಸಂಗಮದೇವ' ಲೋಕದ ಡೊಂಕು ನೀವೇಕೆ ತಿದ್ದುವಿರಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ ಕೂಡಲಸಂಗಮದೇವ 'ಪರನಿಂದೆ ಪರಚಿಂತೆ ನಮಗೇತಕಯ್ಯಾ' ಇವೆಲ್ಲ ಆತ್ಮ ಶುದ್ಧೀಕರಣ ಮಂತ್ರಗಳೆಂದೇ ಹೇಳಬಹುದು.

ಹಲವು ದೇವರ ಆರಾಧನೆಯನ್ನು ನಿಷೇದಿಸುವಲ್ಲಿ 'ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ ಒಬ್ಬನೇ ದೇವ ಕಾಣಿರೋ ಇಬ್ಬರೆಂಬುದು ಹುಸಿ ನೋಡಾ' ಎಲ ಎಲವೋ ಪಾಪಕರ್ಮವ ಮಾಡಿದವನೇ, ಎಲಎಲವೋ ಬ್ರಹ್ಮೇತೀಯ ಮಾಡಿದವನೇ ಒಮ್ಮೆ ಶರಣೆನ್ನೆಲವೋ ಜನ್ಮಂಗಳ ಪಾಪವಿನಾಶಕ್ಕೆ ಶಿವನಾಮಸ್ಮರಣೆಯೊಂದೇ ಸಾಕು ಎಂದು ಸಾರಿದ್ದಾರೆ.

ಸಮಾಜ ಸುಧಾರಣೆಗೆ ಹಾಗೂ ಗಹನವಾದ ಆಧ್ಯಾತ್ಮ ತತ್ವಗಳನ್ನು ಬೋಧಿಸುವಲ್ಲಿ ಅವರು ಆಯ್ದುಕೊಂಡದ್ದು ಆಡುನುಡಿಯನ್ನು 'ಜನವಾಣಿಯನ್ನು ದೇವವ್ವಕ್ಕೇರಿಸಿದ ಖ್ಯಾತಿ ಬಸವಣ್ಣನವರದು. ಅವರ ವಚನಗಳಲ್ಲಿ ಸಾಹಿತ್ಯದ ಎಲ್ಲ ಲಕ್ಷಣಗಳನ್ನು ಕಾಣುತ್ತೇವೆ. ಕಾವ್ಯದ ಸೊಬಗನ್ನು ಕಾಣುತ್ತೇವೆ. ಅವರನ್ನು ವಚನ ಸಾಹಿತ್ಯದ ಸೀಮಾಪುರುಷರೆಂದೇ ಕರೆಯ





ಬಹುದು. ಸರಳವಾದ ಮಾತಿನಲ್ಲಿ ಉಪಮೆ, ರೂಪಕ, ದೃಷ್ಟಾಂತ ಇವೆಲ್ಲಾ ತಾನೇ ತಾನಾಗಿ ಹರಿದು ಬಂದಿವೆ. 'ಮೀಸಲನು ಸೊಣಗ ಮುಟ್ಟಿದಂತೆ', 'ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ' 'ಎಳ್ಳಿಲ್ಲದ ಗಾಣವ ನಾಡಿದ ಎತ್ತಿನಂತಾಯಿತೆನ್ನ ಭಕ್ತಿ' 'ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ' 'ಬಡಪಶು ಪಂಕದಲ್ಲಿ ಬಿದ್ದಡೆ ಕಾಲಬಡಿವುದಲ್ಲದೆ ಬೇರೆ ಗತಿಯುಂಟೆ? 'ಒಲೆಹತ್ತಿ ಉರಿದಡೆ ನಿಲಬಹುದಲ್ಲದೆ ಧರೆ ಹತ್ತಿ ಉರಿದಡೆ ನಿಲಲು ಬಾರದು' 'ಹಾಲತೊರೆಗೆ ಬೆಲ್ಲದ ಕೆಸರು 'ಸಕ್ಕರೆಯ ಮಳಲು' ಹೀಗೆ ಎತ್ತ ನೋಡಿದರೂ ಬಸವಣ್ಣನವರ ವಚನಗಳು ಬೆಲ್ಲದಚ್ಚಿನಂತೆ ಸಿಹಿ, ಓದಿದಷ್ಟೂ ಕುತೂಹಲ, ಅನುಭವಿಸಿದಷ್ಟೂ ರಸಾನಂದ, ತಿಳಿದಷ್ಟೂ ಜ್ಞಾನಾಮೃತ, ಕೇಳಿದಷ್ಟೂ ಹಿತಕರ, ಮೆಲಿದಷ್ಟು ಮಧುರ. ಬಸವಣ್ಣನವರ ವಚನಗಳ ಅಧ್ಯಯನವೆಂದರೆ ಅದು ಸಾಗರವನ್ನು ಈಜಿ ವಿಸ್ತಾರವಾದ ಅನುಭವ ಆತ್ಮಜ್ಞಾನವನ್ನು ಪಡೆದಂತೆ ಅವರ ಒಂದೊಂದು ವಚನಗಳು ಮುತ್ತು ರತ್ನಗಳೇ ಸರಿ. ಕಾರಣ ಅವರು ಲೋಕವನ್ನು ವೀಕ್ಷಿಸಿದ ರೀತಿ ಅತ್ಯಂತ ಸೂಕ್ಷ್ಮವೆಂದೇ ಹೇಳಬೇಕು. ❑

## ಪ್ರಕಟಣೆ

### ವಚನ ಪಿತಾಮಹ ಡಾ.ಫ.ಗು. ಹಳಕಟ್ಟಿ ರಾಷ್ಟ್ರೀಯ ಟ್ರಸ್ಟ್(ರಿ.)

**ಮಹಾಲಿಂಗಪುರ–೫೮೭ ೩೧೨, ಬಾಗಲಕೋಟೆ ಜಿಲ್ಲೆ.**

ವಚನಪಿತಾಮಹ ಡಾ.ಫ.ಗು. ಹಳಕಟ್ಟಿ ಅವರ ಸ್ಮರಣಾರ್ಥ ಕಳೆದ 8 ವರ್ಷಗಳಿಂದ ವಿವಿಧ ಕ್ಷೇತ್ರಗಳಲ್ಲಿ ಸ್ಮರಣೀಯ ಸಾಧನೆ ಮಾಡಿದ ಗಣ್ಯ–ಮಹನೀಯರಿಗೆ ರಾಜ್ಯಮಟ್ಟದ 'ಹಳಕಟ್ಟಿ ಶ್ರೀ' ಪ್ರಶಸ್ತಿ ನೀಡುತ್ತ ಬರ ಲಾಗಿದೆ. **2ಮತ್ತು 3 ಏಪ್ರಿಲ್ –2010** ಹಳಕಟ್ಟಿ ವಚನೋತ್ಸವ ರಾಜ್ಯ ಮಟ್ಟದ ನಾಲ್ಕನೆಯ ಸಮ್ಮೇಳನ ಹಮ್ಮಿಕೊಳ್ಳಲಾಗಿದೆ. ಈ ಸಮ್ಮೇಳನವು ಸುಕ್ಷೇತ್ರ ಕೋಡಿ ಮಠ ಹಾರನಹಳ್ಳಿ ಹಾಸನ ಜಿಲ್ಲೆಯಲ್ಲಿ ಜರುಗುವುದು. ಈ ವರ್ಷದ 'ಹಳಕಟ್ಟಿ ಶ್ರೀ' ಪ್ರಶಸ್ತಿಗಾಗಿ ಅರ್ಜಿ ಆಹ್ವಾನಿಸಲಾಗಿದೆ. ಈ ಪ್ರಶಸ್ತಿಯನ್ನು ಮೂರು ವಿಧವಾಗಿ ಕೊಡಲಾಗುತ್ತದೆ. ಅದರ ವಿವರಣೆ ಹೀಗಿದೆ.

**1. ಗ್ರಂಥ :** ಶರಣರ ಜೀವನ, ಸಾಹಿತ್ಯ ವಚನ ವಿಮರ್ಶೆ–ವಿಶ್ಲೇಷಣೆ, ಆಧುನಿಕ ವಚನ–ಇತ್ಯಾದಿ ಶರಣ ಸಾಹಿತ್ಯಕ್ಕೆ ಸಂಬಂಧಿಸಿದ ಮೂರು ಪ್ರತಿಗಳನ್ನು ಕಳುಹಿಸ ಬೇಕು. ಪ್ರಕಟಣೆ ವರ್ಷದ ಬಗ್ಗೆ ನಿರ್ಬಂಧವಿಲ್ಲ. ಆಯ್ಕೆ ಯಾದ ಗ್ರಂಥಕ್ಕೆ ಪ್ರಶಸ್ತಿ ಕೊಡಲಾಗುವುದು.

**2. ವ್ಯಕ್ತಿ:** ಶರಣ ಜೀವನ ಬದುಕಿ, ತಮ್ಮ ಪ್ರಾಮಾಣಿಕ ಕ್ರಿಯಾಶೀಲ ಚಟುವಟಿಕೆಗಳಿಂದ ಆರೋಗ್ಯಪೂರ್ಣ ವ್ಯಕ್ತಿ–ಸಮಾಜದ ಸಂಘಟನೆಗೆ ಶ್ರಮಿಸಿದ ವ್ಯಕ್ತಿಗಳು ತಾವು ಮಾಡಿದ ಕಾರ್ಯಸಾಧನೆ ಕುರಿತು ಸಂಕ್ಷಿಪ್ತ ಪರಿಚಯಪತ್ರ ಕಳಿಸಿಕೊಡಬೇಕು. ಒಬ್ಬರನ್ನು ಆಯ್ಕೆ ಮಾಡಿ ಪ್ರಶಸ್ತಿ ಕೊಡಲಾಗುವುದು.

**3. ಸಂಘಟನೆ :** ಕನಿಷ್ಠ ಹತ್ತು ವರ್ಷಗಳಿಂದ ಶರಣ ಸಾಹಿತ್ಯ–ಸಂಸ್ಕೃತಿ ಪ್ರಸಾರ, ಪ್ರಚಾರ, ಅನುಷ್ಠಾನಕ್ಕಾಗಿ ಶ್ರಮಿಸಿದ ಪುರುಷ\ಮಹಿಳಾ ಸಂಘಟನೆಗಳು ಸ್ಥಾಪನೆ ಗೊಂಡ ವರ್ಷ, ಸದಸ್ಯರ ಸಂಖ್ಯೆ, ಸಂಘದ ಉದ್ದೇಶ, ಮಾಡಿದ ಕಾರ್ಯಗಳು, ಮಾಡಬೇಕಾದ ಯೋಜನೆಗಳು, ಇತ್ಯಾದಿ ಕುರಿತು ಆಧಾರಗ ಳೊಂದಿಗೆ ಸಂಕ್ಷಿಪ್ತ ಪರಿಚಯ ಪತ್ರ ಕಳಿಸಿಕೊಡಬೇಕು. ಒಂದು ಸಂಘ–ಸಂಸ್ಥೆಯನ್ನು ಆಯ್ಕೆಮಾಡಿ ಪ್ರಶಸ್ತಿ ಕೊಡಲಾಗುವುದು.

ಈ ಮೂರೂ 'ಹಳಕಟ್ಟಿಶ್ರೀ' ಪ್ರಶಸ್ತಿಗೆ ತಲಾ **5000/–** ರೂ. ನಗದು ಪುರಸ್ಕಾರ ಹಾಗೂ ಪ್ರಶಸ್ತಿ ಫಲಕ ಕೊಡಲಾಗುವುದು. ಪ್ರಶಸ್ತಿಗೆ ಅರ್ಜಿ ಸ್ವೀಕರಿಸುವ ಕೊನೆಯ **ದಿನಾಂಕ 01-03-2010.**

**ಸಂಪರ್ಕ ವಿಳಾಸ :**

**ಡಾ॥ ಬಿ.ಎಂ. ಪಾಟೀಲ**
**ಸಂಸ್ಥಾಪಕರು, ಡಾ॥ ಫ.ಗು. ಹಳಕಟ್ಟಿ**
**ರಾಷ್ಟ್ರೀಯ ಟ್ರಸ್ಟ್(ರಿ.)**
ಮಹಾಲಿಂಗಪುರ–581 312. ಬಾಗಲಕೋಟೆ ಜಿಲ್ಲೆ.
ದೂ: 08350–270959 (ಮ),
271246 (ಆ), ಸಂಚಾರಿ : 9448897455.

# ಶರಣರ ವಚನಗಳಲ್ಲಿ ಸಂಯಮದ ಸಂದೇಶ

-ಬಸವರಾಜ ಹೂಗಾರ *

**ಮಾ**ನವನ ಜೀವನದ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನದದಲ್ಲಿನ ಬಸವಾದಿ ಶರಣರು ಮಾಡಿದ ಸಾಮಾಜಿಕ ಸಾಹಿತ್ಯಿಕ ಕ್ರಾಂತಿ ಸುವರ್ಣಾಕ್ಷರಗಳಲ್ಲಿ ಬರೆಯಲ್ಪಟ್ಟಿದೆ. ಸರಳವಾದ, ಸುಲಭವಾದ ವಚನಗಳ ಮೂಲಕ ತಿಳಿಸಿದ ಅವರ ಅಮರ ಸಂದೇಶ ಮನುಕುಲಕ್ಕೆ ನೀಡಿದ ಅಮೋಘ ಕೊಡುಗೆಯಾಗಿದೆ. ಶರಣ ಶರಣೆಯರ ಹೃದಯಾಂತರಾಳದಿಂದ ಸಹಜವಾಗಿ ಹೊರಹೊಮ್ಮಿದ ವಚನಗಳು ಜನರನ್ನು ಬೆಳಕಿನ ದಾರಿಯಲ್ಲಿ ಮುನ್ನಡೆಸುವ ಜ್ಞಾನಜ್ಯೋತಿಗಳಾಗಿವೆ. ಮಾತನ್ನು ಮೀರಿ, ಮಹದರ್ಥವನ್ನು ತೋರಿ, ಮಾನವ ಚೇತನವನ್ನು ಅಸಮಾನ್ಯತೆಯ ಅನಿಕೇತನವನ್ನಾಗಿಸಲು ಅನುಕೂಲವಾಗಿವೆ. ಸಾರ್ಥಕ ಬಾಳಿನ ಸುವರ್ಣಸೂತ್ರಗಳನ್ನು ಸೂಚಿಸುವ ಶರಣರ ವಚನಗಳು ದೇಶ ಕಾಲವನ್ನು ಮೀರಿ, ವಿಶ್ವಶಾಂತಿಯ ಅರಿವನ್ನು ಬೀರಿ, ಸುಜ್ಞಾನದ ಶ್ರೀಗಿರಿಗೆ ಏರಿಸುವ ಸೋಪಾನಗಳಾಗಿವೆ. ಜನ ಭಾಷೆಯನ್ನು ದೇವ ಭಾಷೆಯನ್ನಾಗಿಸಿದ ಶರಣರ ವಚನಗಳು ಸಾರ್ವಕಾಲಿಕ ಸತ್ಯದ ರತ್ನದರಳುಗಳಾಗಿ ಪಂಚ ಕೋಟಿ ಕನ್ನಡಿಗರ ಚಿರಂತನ ಆಸ್ತಿಯಾಗಿವೆ. ತಮ್ಮ ವಚನಗಳ ಮೂಲಕ ಜೀವನದ ವಿವಿಧ ಮುಖಗಳನ್ನು ತಿಳಿಸಿದ ಶರಣರು ಬಾಳಿಗೆ ಬೆಲೆ ತಂದು ಕೊಡುವ 'ಸಂಯಮ'ದ ಬಗ್ಗೆಯೂ ಹೃದಯಂಗಮವಾಗಿ ನಿರೂಪಿಸಿದ್ದಾರೆ. ಜೀವನ ಮೌಲ್ಯವಾದ 'ಸಂಯಮ'ದ ಪರಿಪಾಲನೆಯಿಂದ ಸದ್ಗತಿಯನ್ನು ಪಡೆಯ ಬಹುದೆನ್ನುವ ಸತ್ಯ ಸಂಗತಿಯನ್ನು ಮನೋಜ್ಞವಾಗಿ ವಿವರಿಸಿದ್ದಾರೆ. ಅವರ ವಚನಗಳಲ್ಲಿನ ಅಂತರಾರ್ಥವನ್ನು ಅರಿತುಕೊಂಡು, ಬಾಳಿನಲ್ಲಿ ಅಳವಡಿಸಿಕೊಂಡು ನಡೆಯುವುದೆ ನಮಗಿರುವ ಅಮೂಲ್ಯವಾದ ಅವಶ್ಯಕವಾದ ಸಾಧನಾ ಪಥವಾಗಿದೆ ಹಾಗೂ ಜೀವನದ ಪರಮ ಚರಮ ಗುರಿಯಾಗಿದೆ.

ವಿವೇಕ ಮತ್ತು ವಿವೇಚನಾ ಶಕ್ತಿಯಿಂದ ಉಳಿದೆಲ್ಲಾ ಜೀವಿಗಳಿಗಿಂತ ವಿಭಿನ್ನವಾದ ಮನುಷ್ಯನಿಗೆ 'ಸಂಯಮ'ದ ಅವಶ್ಯಕತೆಯಿರುತ್ತದೆ. ಸಂಯಮದಿಂದ ವ್ಯಕ್ತಿಯ ಅಂತರಂಗ ಅರಳಿ ಬಹಿರಂಗ ಬೆಳಗಲು ಕಾರಣವಾಗುತ್ತದೆ. ಸಂಯಮವೆಂದರೆ ಇಂದ್ರಿಯಗಳ ಹತೋಟಿ ಎಂದು ಅರ್ಥ. ಹತ್ತು ಹಲವು ಕಡೆ ಹರಿದಾಡುವ ಮನಸ್ಸಿಗೆ ಸಂಯಮ ಬೇಕಾಗುತ್ತದೆ. ಸಂಯಮವಿಲ್ಲದ ಮನಸ್ಸು ಕಡಿವಾಣವಿಲ್ಲದ ಕುದುರೆಯಂತಾಗುತ್ತದೆ. ಸಂಯಮದಿಂದ ಮನಸ್ಸು ಒಂದೇ ಕಡೆ ಸ್ಥಿರಗೊಂಡು ಮಾನವನಿಗೆ ಸಾಧಿಸಬೇಕಾದ ಗುರಿಗೆ ಅನುಕೂಲಮಾಡಿಕೊಡುತ್ತದೆ.

ಕಣ್ಣು, ಕಿವಿ, ನಾಲಿಗೆ, ಮೂಗು; ಚರ್ಮ ಇವು ಐದು ಜ್ಞಾನೇಂದ್ರಿಯಗಳು. ಇವು ಮನುಷ್ಯನಿಗೆ ವಸ್ತುಗಳ ದ್ವಾರಾ ಜ್ಞಾನವನ್ನೀಡಲು ಸಹಕಾರಿಯಾಗಿವೆ. ಇದರಂತೆ ಕೈ, ಕಾಲು, ಮಾತು, ಗುದ ಗುಹ್ಯ ಇವು ಐದು ಕರ್ಮೇಂದ್ರಿಯಗಳು. ಇವು ಮನುಷ್ಯನಿಗೆ ಕಾರ್ಯ ನಿರ್ವಹಿಸಲು ಉಪಯೋಗವಾಗಿವೆ. ಈ ಹತ್ತು ಇಂದ್ರಿಯಗಳಿಗೆ ಮನಸ್ಸು ಯಜಮಾನದಂತೆ ಆಜ್ಞಾಪಿಸುತ್ತದೆ. ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳಿಗೆ ಸಂಯಮವಿರಬೇಕು. ಅವಶ್ಯವಾಗಿರುವಂತೆ ಇವುಗಳನ್ನು ಆಳುವ ಮನಸ್ಸಿಗೆ ಪ್ರಮುಖವಾಗಿ ಸಂಯಮವಾಗಿರಬೇಕಾಗುತ್ತದೆ. ಜ್ಞಾನೇಂದ್ರಿಯಗಳಲ್ಲಿ ರುಚಿ ನೋಡುವ, ಸ್ಪರ್ಶಜ್ಞಾನ ತಿಳಿಯುವ ಹಾಗೂ ಮಾತನಾಡುವ ಶಕ್ತಿಯುಳ್ಳ ನಾಲಿಗೆಯ ಪಾತ್ರ ಮಹತ್ವಪೂರ್ಣವಾದುದು. ಸಂಯಮವಿಲ್ಲದ ನಾಲಗೆ ಅನುಚಿತವಾದುದನ್ನು ಆಡಿ ಮನುಷ್ಯನನ್ನು ಕಷ್ಟ ನಷ್ಟಕ್ಕೆ ಗುರಿಪಡಿಸುತ್ತದೆ. ಮಿತಿಯಿಂದ ಉಂಡರೆ ಯಾವ ರೋಗವೂ ಬರುವುದಿಲ್ಲ. ಅನಗತ್ಯ ಮಾತನಾಡದಿದ್ದರೆ ಯಾವ ಜಗಳವೂ ನಡೆಯುವುದಿಲ್ಲ. ಅದಕ್ಕೆಂದೇ 'ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ' ಎಂಬ ಗಾದೆ ಮಾತು ಬಳಕೆಯಲ್ಲಿದೆ. ನಾಲಿಗೆಯ ಮೇಲೆ ನಿಯಂತ್ರಣ ಸಾಧಿಸಿದವನು ಆರೋಗ್ಯವಂತನಾಗಿ ಮತ್ತು

* ಮುಕ್ಕಾಂ ಅಂಚೆ ಹಿರೇಸಿಂಗನಗುತ್ತಿ, ಹುನಗುಂದ ತಾ||, ಬಾಗಲಕೋಟೆ ಜಿಲ್ಲೆ.





ಮರ್ಯಾದೆವಂತನಾಗಿ ಬಾಳುತ್ತಾನೆ. ಇದರಂತೆ ಕರ್ಮೇಂದ್ರಿಯಗಳಾದ ಕೈ, ಬಾಯಿ(ಮಾತು), ಕಚ್ಚೆ(ಕಾಮ)ಯ ಬಗ್ಗೆ ಸಂಯಮವಿರಬೇಕು. ಅದಕ್ಕೆಂದೇ ಸರ್ವಜ್ಞನು ತನ್ನದೊಂದು ವಚನದಲ್ಲಿ ಕೈಬಾಯಿ ಕಚ್ಚೆ ತನ್ನ ಇಚ್ಚೆಯಲ್ಲಿದ್ದರೆ ಅಚ್ಯುತನಪ್ಪ ಅಜನಪ್ಪ ನಿಶ್ಚಿಂತನಪ್ಪ ಎಂದು ಹೇಳಿದ್ದಾನೆ. ಅದಕ್ಕಾಗಿ ಈ ಹತ್ತು ಇಂದ್ರಿಯಂಗಳ ಮೇಲೆ ಎಲ್ಲಕ್ಕೂ ಮೊದಲು ಮನಸ್ಸಿನ ಮೇಲೆ ನಿಯಂತ್ರಣ ಸಾಧಿಸುವುದು ಮಾನವನ ಆದ್ಯ ಕರ್ತವ್ಯವಾಗಿದೆ. ಆಮೆ ಸಂಯಮ ಗುಣಕ್ಕೆ ಸಂಕೇತವಾಗಿದೆ. ಏಕೆಂದರೆ ಅದು ನೀರಿನಲ್ಲಿದ್ದಾಗ ಮತ್ತು ಭೂಮಿಯ ಮೇಲಿದ್ದಾಗ ಮನುಷ್ಯನ ಸುಳಿವು ಸಿಕ್ಕ ಕೂಡಲೇ ಒಮ್ಮೆಲೆ ತನ್ನ ಎಲ್ಲಾ ಅವಯವಗಳನ್ನು ಹೊಟ್ಟೆಯೊಳಗೆ ಸೇರಿಸಿಕೊಳ್ಳುತ್ತದೆ. ಮನುಷ್ಯರು ಇಲ್ಲದ ಸಮಯದಲ್ಲಿ ಪುನಃ ತನ್ನ ಎಲ್ಲ ಅವಯವಗಳನ್ನು ಹೊರಗೆ ಬಿಡುತ್ತದೆ. ಅದಕ್ಕಾಗಿಯೇ ದೇವರ ಗರ್ಭಗುಡಿಯ ಮುಂದೆ ಆಮೆಯ ಮೂರ್ತಿ ಇರುತ್ತದೆ. ಇದರರ್ಥ ದೇವಸ್ಥಾನಕ್ಕೆ ಬಂದಾಗ ಮನುಷ್ಯನ ಮನಸ್ಸು(ಇಂದ್ರಿಯಗಳು) ಒಂದೇ ಕಡೆ ಅಂದರೆ ದೇವರ ಬಳಿ ಸ್ಥಿರವಾಗಿರಬೇಕೆಂಬುದಾಗಿದೆ. ಆಮೆಯ ಸಂಯಮದ ಗುಣ ಮನುಷ್ಯನಿಗೆ ಬರಬೇಕಾಗಿದೆ ಹಾಗೂ ಸಣ್ಣದಾದ ಆಮೆಯಿಂದಲೇ ಮನುಷ್ಯ ಸಂಯಮದ ಪಾಠವನ್ನು ಕಲಿತುಕೊಳ್ಳಬೇಕಾಗಿದೆ.

ಮಾನವನ ಜೀವನದಲ್ಲಿ ಮನಸ್ಸಿನ ಪಾತ್ರ ಪ್ರಮುಖವಾದುದು. ಅದು ಅವನ ಉನ್ನತಿಗೆ ಹಾಗೂ ಅವನತಿಗೆ ಕಾರಣವಾಗಿದೆ. ಮನಸ್ಸನ್ನು ಗೆದ್ದವನೇ ನಿಜವಾದ ಶೂರನೆಂದು ಅನುಭಾವಿಗಳು ಹೇಳುತ್ತಾರೆ. ಯೌವನಕ್ಕೆ ಬಂದಾಗ ದೇಹದಲ್ಲಿನ ಎಲ್ಲಾ ಅಂಗಗಳು ಬೆಳೆದು ಜ್ಞಾನೇಂದ್ರಿಗಳು, ಕರ್ಮೇಂದ್ರಿಯಗಳು ಕಾರ್ಯಶೀಲವಾಗುತ್ತವೆ. ಈ ವೇಳೆಯಲ್ಲಿ ಮನುಷ್ಯನು ತನ್ನ ಮನಸ್ಸಿನ ಮೇಲೆ ನಿಯಂತ್ರಣ ಸಾಧಿಸಿ ಕಾಮವನ್ನು ಜಯಿಸುವುದು ಸುಲಭದ ಮಾತಲ್ಲ. ಹಿಂದಿನ ಋಷಿ ಮುನಿಗಳು, ದೇವದಾನವರು ಮಾಯಾ ರೂಪದ ಮೋಹಕ್ಕೆ, ಒಳಗಾದ ಉದಾಹರಣೆಗಳಿವೆ. ಈ ಸಂಗತಿಗಳನ್ನೇ ಮಾಯಾಕೋಲಾಹಲನಾದ ಹಾಗೂ ವೈರಾಗ್ಯನಿಧಿಯಾದ ಅಲ್ಲಮಪ್ರಭುದೇವರು ತಮ್ಮದೊಂದು ವಚನದಲ್ಲಿ ಪ್ರಭಾವಪೂರ್ಣವಾಗಿ ವಿವರಿಸಿದ್ದಾರೆ.

*'ಬ್ರಹ್ಮ ವಿಷ್ಣುಗಳ ಮಾಯೆ ತೊತ್ತಳ ತುಳಿವೆಂದು*
*ದೇವ ದಾನವರ ಮಾಯೆ ಅಗಿದಗಿದು ತಿಂಬಂದು*
*ರುದ್ರಗಣ, ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿ*
*ಕಾಡುವಂದು, ನೊಸಲ ಕಣ್ಣು, ಪಂಚಮುಖ ದಶಭಿಜದವರಿಗೆ*
*ಮಾಯೆ ಅರ್ಧಾಂಗಿಯಾದಂದು.*
*ಅಷ್ಟಾಶೀತಿ ಸಹಸ್ರ ಋಷಿಯರುಗಳ ಮಾಯೆ ತಪೋಮದದಲ್ಲಿ*
*ಕೆಡಹುವಂದು.*
*ನಾನು ಮಾಯಾಕೋಲಾಹಲನಾಗಿರ್ದೆ ಕಾಣಾ ಗುಹೇಶ್ವರಾ!*

ಮನುಷ್ಯನಿಗೆ ಮೋಹವೇ ಮಾಯೆಯಾಗಿ ಕಾಡುವುದುಂಟು. ಮಾಯೆ ಬಹುರೂಪಿ ಹಾಗೂ ಬಣ್ಣಗಾತಿ. ವಿವಿಧ ರೂಪ ಧರಿಸಿ ಅದು ಮಾನವನ ಮುಂದೆ ನಿಲ್ಲುತ್ತದೆ. ಈ ಮಾಯೆ ಮನಸ್ಸಿನ ಮೂಲಕ ತನ್ನ ಇಚ್ಛೆಯನ್ನು ತೋರ್ಪಡಿಸುತ್ತದೆ. ಈ ಮಾಯೆಯು ತನ್ನ ಮನಸ್ಸಿನ ಮೂಲಕ ಹೇಗೆ ಕಾಡುತ್ತಿದೆಯೆಂಬುದನ್ನು ಅಣ್ಣಬಸವಣ್ಣನವರು ತುಂಬಾ ಪರಿಣಾಮಕಾರಿಯಾಗಿ ಈ ವಚನದಲ್ಲಿ ತಿಳಿಸಿದ್ದಾರೆ.

*'ನಾನೊಂದ ನೆನೆದಡೆ ತಾನೊಂದ ನೆನೆವುದು*
*ನಾನಿತ್ತಲೆಳೆದಡೆ ತಾನತ್ತ ಲೆಳೆವುದು*
*ತಾ ಬೇರೆ ಎನ್ನ ಬಳಲಿಸಿ ಕಾಡಿತ್ತು*
*ಕೂಡಲಸಂಗನ ಕೂಡಿಹೆನೆಂದಡೆ*
*ತಾನೆನ್ನ ಮುಂದುಗೆಡಿಸಿತ್ತು ಮಾಯೆ!'*

ಅನುಭವ ಮಂಟಪದಲ್ಲಿ ಅನೇಕ ಶರಣ ಶರಣೆಯರು ಸೇರಿ ಮಾನವನ ಅಂತರಂಗದಲ್ಲಿ ಅಡಗಿದ ಕಾಮ, ಕ್ರೋಧ ಮೊದಲಾದ ಆರು ವೈರಿಗಳ ಅಸ್ತಿತ್ವದ ಬಗ್ಗೆ ಚಿಂತನೆ ನಡೆಸಿದರು. ಪಂಚೇಂದ್ರಿಯಗಳ ಸಹಜ ಸ್ವಭಾವಕ್ಕೆ ಧಕ್ಕೆ ತರದೆ ಅವುಗಳಿಗೆ ಉತ್ತಮ ಸಂಸ್ಕಾರ ನೀಡಬೇಕೆಂಬ ನಿರ್ಧಾರಕ್ಕೆ ಬಂದರು. ಇಂದ್ರಿಯಗಳ ಸದ್ಬಳಕೆಯಿಂದ ಶರಣನಾಗಲು ಬರುವುದೆಂಬ ನಿಶ್ಚಿತ ನಿಜ ಸಂಗತಿಯನ್ನು ವಚನಗಳ ಮೂಲಕ ನಿವೇದಿಸಿದರು. ಜ್ಞಾನ ನಿಧಿ ಚೆನ್ನಬಸವಣ್ಣನವರ ಈ ವಚನ ಮಾರ್ಗದರ್ಶಕವಾಗಿದೆ.

*'ಶ್ರೋತೃವು ಸ್ವರ ಶಬ್ದ ನಾದಂಗಳ ಬಲ್ಲುದು*
*ನೇತ್ರಂಗಳು ಸಪ್ತ ವರ್ಣಂಗಳಂ ಕಂಡು ಸುಖಿಸುವುದು*
*ಘ್ರಾಣವು ಗಂಧ ದುರ್ಗಂಧಗಳಂ ಬಲ್ಲುದು*

*ಜಿಹ್ವೆ ಮಧುರ ಆಮ್ಲ ತಿಕ್ತಕಟು ಕಷಾಯಂ ಬಲ್ಲುದು*
*ತ್ವಕ್ಕು ಸ್ಪರ್ಶವ ಮೃದು, ಕಠಿನ ಶೀತೋಷ್ಣವಂ ಬಲ್ಲುದು*
*ಇಂತೀ ಜ್ಞಾನೇಂದ್ರಿಯಂಗಳ ಸಂಚಲನವರಿದು ನಿಜ*
*ಉಳಿಯಬಲ್ಲಡೆ ಕೂಡಲ ಚೆನ್ನಸಂಗಯ್ಯನಲ್ಲಿ*
*ಶರಣನೆನಿಸುವನು.*

ಶರಣರು ತಮಗೆ ದೊರೆತ ಭೋಗ ಭಾಗ್ಯವನ್ನು ಕಷ್ಟ ನಷ್ಟಗಳನ್ನು ಅವು ದೇವರ ಪ್ರಸಾದವೆಂದು ಸ್ವೀಕರಿಸಿದರು. ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಗಳಂತೆ ನಿರ್ಲಿಪ್ತರಾಗಿ ಜೀವನ ಸಾಗಿಸಿದರು. ಕಮಲ ಕೆಸರಿನಲ್ಲಿ ಹುಟ್ಟಿ ಬೆಳೆದರೂ ಅದು ಕೆಸರನ್ನು ತನ್ನ ಮೈಗೆ ಅಂಟಿಸಿಕೊಳ್ಳದಂತೆ ಶರಣರು ಸಂಸಾರದಲ್ಲಿದ್ದರೂ ಅದರ ಜಂಜಾಟವನ್ನು ಮನಕ್ಕೆ ಸೋಂಕದಂತೆ ಬಾಳಿ ಬೆಳಗಿದರು. ಇಂದ್ರಿಯಗಳನ್ನು ನಿಗ್ರಹಿಸದೆ ಅವುಗಳಿಗೆ ಸಂಸ್ಕಾರ ಕೊಟ್ಟು ಅನುಗ್ರಹಿಸಿದರು. ಹೊನ್ನು ಪಾಪದ ಸಿಂಬೆಯಾಗದಂತೆ ಮಣ್ಣು ಅಹಂಕಾರದ ಕೊಂಬೆಯಾಗದಂತೆ ಹೆಣ್ಣು, ಭೋಗದ ಗೊಂಬೆಯಾಗದಂತೆ ನೋಡಿಕೊಂಡು ಸಂಸಾರದಿಂದ ಸದ್ಗತಿಯನ್ನು ಪಡೆದರು. □

## ಸೋಮೇಶ್ವರ ಶತಕ

*ಕಡಿದಾಡಲ್ ರಣರಂಗದೊಳ್ ನೃಪರೊಳಂ*
*ತಾನಗ್ಗದಿಂದ ಕಾದೊಡಂ ।*
*ಮೃಡನಂ ಮೆಚ್ಚಿಸಿ ಕೇಳ್ದೊಡಂ ತೊಳಲಿ ತಾಂ*
*ದೇಶಾಟನಂಗೆಯ್ದೊಡಂ ॥*
*ಕಡಲೇಳಂ ಮಗುಚಿಟ್ಟೊಡಂ ಕಲಿಯೆ ನಾನಾ ಹೃದ್ಯ*
*ವಿದ್ಯಂಗಳಂ ।*
*ಪಡೆದಷ್ಟಲ್ಲದೆ ಬರ್ಪುದೇ*
*ಹರಹರಾ ಶ್ರೀ ಚೆನ್ನಸೋಮೇಶ್ವರಾ ॥*

ಯುದ್ಧದಲ್ಲಿ ಶತ್ರುಗಳನ್ನೆಲ್ಲ ಕಡಿದು ಹಾಕಿದರೂ, ದೊರೆಗಳ ಬಳಿ ಹೆಚ್ಚಾಗಿ ಕಾದಿದ್ದರೂ, ಈಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ ವರವನ್ನು ಕೇಳಿದರೂ, ಅನೇಕ ದೇಶಗಳನ್ನು ಸುತ್ತಿ ಬಳಸಿದರೂ, ಏಳು ಸಮುದ್ರಗಳನ್ನು ತಲೆಕೆಳಗು ಮಾಡಿದರೂ, ಹೃದಯಂಗಮವಾದ ಅನೇಕ ವಿದ್ಯೆಗಳು ಕಲಿತರೂ ತನಗೆಷ್ಟು ಲಾಭವೋ ಅಷ್ಟೇ ಬರುವುದಲ್ಲದೆ ಹೆಚ್ಚಾಗಿ ಬರುವುದಿಲ್ಲ.

## ತಿರುಕ್ಕುರುಳ್

ಕನ್ನಡ ಅನುವಾದ : ನ. ಮುನಿಸ್ವಾಮಿ
ಅಧ್ಯಾಯ –೧೯
ಗೃಹಧರ್ಮ

### ಹಿಂದಾಡದಿರುವುದು

ಧರ್ಮವ ನುಡಿಯದೆ ಪಾಪಕಾರ್ಯವನೆಸಗಿದರೂ
ಹಿಂದಾಡದವನೆನಿಸಿ ಕೊಳುವುದು ಲೇಸು.

ಅಧರ್ಮಿಯಾಗಿ ಅಕಾರ್ಯವೆಸಗುವುದಕಿಂತ ಕೇಡು,
ಹಿಂದೆ ತೆಗಳಿ ಮುಂದೆ ಹುಸಿನಗೆಯ ತೋರಲು.

ಹಿಂದಾಡಿ ಹುಸಿದು ಬದುಕುವುದಕಿಂತ, ಸಾಯುವುದು
ಧರ್ಮಬೋಧಿಸುವ ಶ್ರೇಯವ ತರುವುದು.

ಎದುರಲ್ಲಿದ್ದಾಗ ಕಟುನುಡಿಯನಾಡಿದರೂ, ಆಡದಿರು
ಎದುರಲಿರದಾಗ ವಿವೇಚಿಸದ ನುಡಿಯನು.

ಧರ್ಮವನೊಬ್ಬ ಮನಸಾರೆ ಹೇಳದವನೆಂಬುದನು,
ಅವನು ಹಿಂದಾಡುವ ಅಲ್ಪತನದಿಂದರಿವುದು.

ಹೆರರ ದೋಷಗಳ ಎತ್ತಿ ಹೇಳುವವನ ದೋಷವೆಲ್ಲವು
ಹೆರರಿಂದಲೇ ತಕ್ಕ ಸಮಯದಲಿ ಬಯಲಾಗುವುವು

ಹಿಂದಾಡಿ ಸುಖ ಅಗಲಿಸುವರು, ನಗುವಂತೆ ನುಡಿದು
ಸ್ನೇಹ ಬೆಳಸಲರಿಯದವರು.

ಸ್ವಜನರ ದೋಷವನೂ ಎತ್ತಿ ನುಡಿವವರು,
ಎಂತಿರುವರೋ ಅನ್ಯರ ವಿಷಯದಲಿ ?

ತನ್ನ ಧರ್ಮವೆಂದೆಣಿಸಿ ಧರೆ ಹೊತ್ತಿಹುದೋ ಹೆರನಿಲ್ಲಂದು
ಹಿಂದಾಡುವವನ ಒಡಲ ಹೊರೆಯನು ?

ಅನ್ಯರ ದೋಷದಂತೆ ತಮ್ಮ ದೋಷವನೂ
ಕಾಣುವುದಾದರೆ
ಅದರಿಂದ ಕೇಡುಂಟೋ ಮನುಜರಿಗೆ ?





## ಯುಗಾದಿಗಳ ಹಾದಿಯಲ್ಲಿ......

–ಯು.ಎನ್. ಸಂಗನಾಳಮಠ*

**ಯು**ಗಾದಿ ಮತ್ತೆ ಬಂದಿದೆ. ವಿರೋಧಿನಾಮ ಸಂವತ್ಸರವನ್ನು ಅನೇಕ ಭಯ ಗೊಂದಲ, ಗೋಜಲು ಆಮೋದ–ಪ್ರಮೋದ, ಸಾವು–ನೋವುಗಳ ಮಧ್ಯೆ ಕಳೆದು ವಿಕೃತ ಸಂವತ್ಸರದ ಫಲಾಫಲಗಳನ್ನು ಎದುರು ನೋಡುವ ಸಮಯ ಬಂದಿದೆ. ಮತ್ತೆ ಪುನಃ ಎಲ್ಲ ಭಾವನೆಗಳಿಗೆ ಸ್ಪಂದಿಸುವ, ಹೊಸ ಕಾಲಕ್ಕೆ ಸಿದ್ಧವಾಗುವ ಬೇವು–ಬೆಲ್ಲದ ಸಂಕೇತವೇ ಯುಗಾದಿ.

ಕವಿ **ಬೇಂದ್ರೆ**ಯವರ ಅಮರ ಪದ್ಯ **'ಯುಗಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ ಹೊಸ ವರುಷಕೆ ಹೊಸ ಹರುಷವ ಹೊಸತು ಹೊಸತು ತರುತಿದೆ'** ನೆನಪಿಗೆ ಬರುತ್ತದೆ. ಯುಗ(ನೂತನ ವರ್ಷ) ಆದಿ (ಪ್ರಾರಂಭ) ಹರ್ಷದಾಯಕವಾಗಲಿ, ಸಿಹಿ–ಕಹಿ ಎರಡನ್ನೂ ಸಮನಾಗಿ ಸ್ವೀಕರಿಸಿ ಹಬ್ಬವನ್ನು ಆಚರಿಸಬೇಕೆಂಬುದೇ ಎಲ್ಲರ ಮನದಾಳದ ಇಚ್ಛೆ. ಆದರೆ ಆ ಅದೃಷ್ಟ ನಮಗೆ ಸಿಗದೇ ಸಿಹಿಗಿಂತ ಕಹಿ ಅನುಭವಗಳೇ ಹೆಚ್ಚಾಗಿವೆ. ಉಗ್ರಗಾಮಿಗಳ ಚಟುವಟಿಕೆಗಳು ಪ್ರತಿದಿನ ಕೊಲೆ ಸುಲಿಗೆ ಅತ್ಯಾಚಾರ ವಾಹನಗಳ ಅಪಘಾತ, ವರದಕ್ಷಿಣೆಯ ಅಟ್ಟಹಾಸ. ಮಠ ಮಂದಿರಗಳ ಮುಸಿಕಿನ ಗುದ್ದಾಟ, ನೆಲಜಲಕ್ಕೆ ಕಾದಾಟ, ಜಾತ್ಯಾದಾರಿತ ರಾಜಕಾರಣ, ರೈತರ ಆತ್ಮಹತ್ಯೆ ಪ್ರಕರಣಗಳು, ಪರಿಸರ ಮಾಲಿನ್ಯ, ಶುದ್ಧ ನೀರು–ವಾಯುಗಳ ಕೊರತೆ, ತೆರಿಗೆಗಳ ಭಾರ, ಭಯೋತ್ಪಾದನೆಯ ಆತಂಕ ಇತ್ಯಾದಿಗಳ ಮಧ್ಯೆ ಸಿಲುಕಿ ಶ್ರೀಸಾಮಾನ್ಯ ನೋವು ತುಂಬಿದ ಮನದಿಂದ ಯುಗಾದಿಯನ್ನು ಸ್ವಾಗತಿಸುವುದು ಅನಿವಾರ್ಯವಾಗಿದೆ. ಮತ್ತೆ ಬೇಂದ್ರೆ ಹೇಳಿದ ಹಾಗೆ ನಮ್ಮನ್ನಷ್ಟೇ ಮರೆತಿದೆ ಎನ್ನುವ ಸಾಲು ನೋಡಿದಾಗ– ಶರತ್ ಋತುವಿನಲ್ಲಿ ಹಣ್ಣೆಲೆಗಳು ಉದುರಿ ವಸಂತ ಋತುವಿನಲ್ಲಿ ಹಸಿರೆಲೆ ಚಿಗುರಿದಾಗ ಪ್ರಕೃತಿಯಲ್ಲಿ ಹೊಸತನ ಕಂಡು ಬರುವುದು. ವಸಂತವು ಮರಗಳಲ್ಲಿ ಹಸಿರನ್ನು ಝರಿಗಳಲ್ಲಿ ಜುಳುಜುಳು ನಿನಾದವನ್ನು, ಭ್ರಮರಗಳಲ್ಲಿ ಗುಂಜಾರವವನ್ನು, ಕೋಗಿಲೆಯಲ್ಲಿ ಕುಕಿಲತೆಯನ್ನು ಉಂಟುಮಾಡುತ್ತದೆ.

ಕವಿ ದೊಡ್ಡರಂಗೇಗೌಡರು ತಮ್ಮ ನೂತನ 'ಬಾಗಿನ' ಪದ್ಯದಲ್ಲಿ ಚೈತ್ರದಾಗಮನವನ್ನು 'ಚೈತ್ರ ಬರಲು ಚೈತ್ರನ್ಯದುಸಿರ ಅವಶಕ್ತಿಯ ಚೇತನ ತರುಲತೆಯಲ್ಲಿ ಹಸಿರೋ ಹಸಿರು ಉತ್ಸಾಹದ ರಿಂಗಣ ಕೊಂಬೆರೆಂಬೆಗಳು ಘೂವಿನ ಮಾತಾಡಿ ಹೂ ತೇರಿನ ಬಾಗಿನ ತಾಯಿ ಧರಿತ್ರಿಗೆ ನಗುಮೊಗದ ಮೋಡಿಯ ಸಿರಿ ಔತಣ॥ ಎಲ್ಲೆಲ್ಲೂ ಪತ್ರೆ ಎಲ್ಲೆಲ್ಲೂ ಪುಷ್ಪ ಚಿಲಿಪಿಲಿ ಉಲಿ ಉದ್ಯಾನ ಈ ಯುಗಾದಿಗೆ ಹೊಸ ಬೇಟಿ ಸೀರೆ ಉಟ್ಟ ಆವನಿಯ ಪ್ರಸಾದವ ಪಟ್ಟಕ್ಕೆ ಬಂದಳು ತರುಣಿ ಧಾರುಣಿ ಹಾಡ ಹಾಡುತ್ತಾ ಚೈತ್ರಗಾನ ಅಂಗುಲಂಗುಲೀಗ ಚೆಂದದ ತೋರಣ ಆಗಿದೆ ವಸಂತಾಗಮನ ಎಂದು ವರ್ಣಿಸಿದ್ದಾರೆ.

ಮಾನವನ ಬದುಕಿನಲ್ಲಿ ಒಂದೇ ಬಾಲ್ಯ, ಒಂದೇ ಹರೆಯ. ಒಂದೇ ಮುಪ್ಪು ಇದ್ದರೆ ಪ್ರಕೃತಿಗೆ ಪ್ರತಿ ವರ್ಷ ಇವೆಲ್ಲ ಇವೆ. ಹೀಗೆ ಪ್ರಕೃತಿ ನಿತ್ಯನೂತನ, ಆದರೆ ಮಾನವನಿಗಿರುವ ಮಿತ ಸಮಯಾವಕಾಶದಲ್ಲಿ ಜೀವನದ ಎಲ್ಲ ಸುಖದುಃಖಗಳನ್ನು ಸವಿಯಬೇಕು. ಸಮಯ ಸರಿದಂತೆ ಸಾವಿನ ಸಮೀಪ ಸಾಗುತ್ತಿರುವ ಬದುಕು ಆತಂಕದಿಂದ ತುಂಬಿದೆ. ಈ ಬದುಕು ಬೇಸರವಾಗದೇ ಚೈತನ್ಯವಾಗಿರಿಸಲು ವಸಂತ ಋತು ಸ್ಫೂರ್ತಿ ತುಂಬುತ್ತದೆ.

ಪ್ರೇಮಿಗಳ ಕನಸುಗಾರರ ಮಾಸ ಚೈತ್ರ. ಕಾಳಿದಾಸನ ಪ್ರಕಾರ ಕಾಮ ಇದ್ದರೂ ಕೆರಳುವಿಕೆ ಇಲ್ಲದ ರಸಿಕತೆ ಸೌಂದರ್ಯ ಇದೆ. ಆದರೆ ವಿಕೃತಿ ಇಲ್ಲ. ಶಿವನನ್ನು ಕಾಣಲು ಬಂದ ಸತಿ, ಕೃಷ್ಣನನ್ನು ಕಾಣಲು ಬಂದ ರಾಧೆ ಹೀಗೆ ಪ್ರೇಮಿಗಳು ವಿರಹಿಗಳು ಸಂಧಿಸುವ ಸಮಯ ಹೀಗೆ ವಸಂತ ಋತು ಶೃಂಗಾರ ಋತು.

ಹಿಂದೂ ಧರ್ಮ, ಜ್ಯೋತಿಷ್ಯದ ಪ್ರಕಾರ ಚೈತ್ರ ಶುದ್ಧ ಪ್ರತಿಪದಿಲು ಅಥವಾ ಪಾಡ್ಯದ ದಿನವೇ ಯುಗಾದಿ. ಹಿಂದುಗಳಿಗೆ ನೂತನ ವರ್ಷಾರಂಭ. ಸಂಕ್ರಾಂತಿಯಿಂದ

* ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಹೊನ್ನಾಳಿ–೫೭೭ ೨೧೭.

ಸುಗ್ಗಿಯ ಹಿಗ್ಗು ಅನುಭವಿಸುತ್ತಿರುವ ರೈತರೆಲ್ಲಾ ಯುಗಾದಿ ಹೊತ್ತಿಗೆ ಬೆಳೆಯನ್ನು ತೆಗೆದುಕೊಂಡಿರುತ್ತಾರೆ. ವೈಭವದಿಂದ ಸಡಗರದಿಂದ ಯುಗಾದಿ ಆಚರಿಸುತ್ತಾರೆ. ವ್ಯಾಪಾರಸ್ಥರು ಹೊಸ ಲೆಕ್ಕ ಆರಂಭಿಸುವರು. ಯುಗಾದಿ ಹೊಸ ತೇದಿ, ಮಾವು ಬೇವು ಎಲ್ಲ ಹಸಿರು. ಎಲ್ಲೆಲ್ಲೂ ಹಸಿರು. ಪ್ರಕೃತಿ ತನ್ನ ದೃಶ್ಯವೈಭವವನ್ನು ಮೆರೆಸಲು ಸನ್ನದ್ಧರಾಗಿರುತ್ತಾಳೆ. ಪ್ರಕೃತಿಯ ಸಂತಸಮಯ ವಾತಾವರಣವನ್ನು ಸಾಮಾನ್ಯರು ಮನೆಯಲ್ಲಿ ಮಾವು-ಬೇವು ತಳಿರು ತೋರಣಗಳಿಂದ ಅಲಂಕರಿಸಿ ಅಂಗಳ ಸಾರಿಸಿ, ಬಾಗಿಲುಗಳಿಗೆ ಅರಿಶಿಣ-ಕುಂಕುಮ ಇಟ್ಟು ಎಣ್ಣೆ ನೀರು ಹಾಕಿಕೊಂಡು ಹೊಸ ವಸ್ತ್ರ ತೊಡುಗೆಗಳನ್ನು ಧರಿಸಿಕೊಂಡು, ಬೇವು-ಬೆಲ್ಲ ಸೇರಿಸಿ ಪಂಚಾಂಗ ಶ್ರವಣ ತಮ್ಮ ಕುಲದೇವರನ್ನು ಪೂಜಿಸುವರು. ಸಾಯಂಕಾಲ ಚಂದ್ರ ದರ್ಶನ ಮಾಡಿ ಗುರು-ಹಿರಿಯರಿಗೆ ನಮಸ್ಕರಿಸುವರು.

**ಪೌರಾಣಿಕ ಹಿನ್ನಲೆ :**

ಸೃಷ್ಟಿಕರ್ತನಾದ ಬ್ರಹ್ಮ ಈ ಜಗತ್ತನ್ನು ಸೃಷ್ಟಿಸಿದ ಯುಗಾದಿ. ಶ್ರೀರಾಮಚಂದ್ರನಿಗೆ ಅಯೋಧ್ಯೆಯಲ್ಲಿ ಪಟ್ಟಾಭಿಷೇಕವಾದದ್ದು ಯುಗಾದಿಯಂದು ಶ್ರೀರಾಮನೊಂದಿಗೆ ಅಯೋಧ್ಯಾವಾಸಿಗಳೆಲ್ಲರೂ ವಿಜಯಪತಾಕೆ ಹಾರಿಸಿದರು. ಇದರ ಸಂಕೇತವಾಗಿ ಗುಡಿಪಾಡ್ಯ (ಗುಡಿ+ಬಾವುಟ) ಎಂದು ಯುಗಾದಿಯನ್ನು ಆಚರಿಸುವರು. ಶಾಲಿವಾಹನ ಶಕೆ ಆರಂಭ ವಾದ ದಿನ. ಶಕನು ಈ ದೇಶದ ಮೇಲೆ ದಾಳಿ ಮಾಡಿದಾಗ ನರ್ಮದಾ ಕಾವೇರಿಗಳ ನಡುವೆ ರಾಜ್ಯವಾಳುತ್ತಿದ್ದ ಶಾಲಿವಾಹನ ಮೊರೆ ಅವರ ಬಲವನ್ನು ಮುರಿದು ವಿಜಯ ಆಚರಿಸುದ ದಿನ ಇದು ಐತಿಹಾಸಿಕ ದಿನದ ಮಹತ್ವ.

**ಖಗೋಳ ಹಿನ್ನಲೆ :**

✎ ಯುಗಾದಿಯಲ್ಲಿ ಚಾಂದ್ರಮಾನ, ಸೌರಮಾನ ಎಂದು ಎರಡು ಬಗೆ. ಚಂದ್ರನ ಚಲನೆಯನ್ನು ಅನುಸರಿಸಿ ಅಮಾವಾಸ್ಯೆ-ಹುಣ್ಣಿಮೆಗಳ ಆಧಾರದ ಮೇಲೆ ಮಾಸಗಣನೆ ನೋಡುವುದು ಚಾಂದ್ರಮಾನ ಯುಗಾದಿ. ಹುಣ್ಣಿಮೆಯ ದಿನ ಚಂದ್ರ ಯಾವ ನಕ್ಷತ್ರದಲ್ಲಿ ಇರುವನೋ ಆ ನಕ್ಷತ್ರದ ಹೆಸರೇ ಆ ಮಾಸದ ಶುಭನಾಮ. ಕರ್ನಾಟಕ, ಆಂಧ್ರ, ಕೇರಳ, ಮಹಾರಾಷ್ಟ್ರಗಳಲ್ಲಿ ಚಂದ್ರಮಾನ ಯುಗಾದಿ ಪದ್ಧತಿ ಇದೆ. ಸೂರ್ಯ ಮೇಷ ರಾಶಿ ಪ್ರವೇಶಿಸುವ ದಿನ ಸೌರ ಮಾನ ಯುಗಾದಿ ಆಚರಿಸುವರು. ತಮಿಳುನಾಡು ಉತ್ತರ ಭಾರತದ ಹಲವಾರು ರಾಜ್ಯಗಳಲ್ಲಿ ಈ ಪದ್ಧತಿ ಇದೆ. ಕ್ರಿ.ಶ. 5ನೇ ಶತಮಾನದಲ್ಲಿದ್ದ ಪ್ರಸಿದ್ಧ ಖಗೋಳ ತಜ್ಞ ವರಾಹಮಿಹಿರನು ಚೈತ್ರಶುದ್ಧ ಪಾಡ್ಯ ಹೊಸ ವರ್ಷ ಎಂದು ದೃಢೀಕರಿಸಿದ್ದಾನೆ.

**ವೈದ್ಯಕೀಯ ಹಿನ್ನಲೆ :**

ಶತಾಯುರ್ ವಜ್ರದೇಹಾಯ ಸರ್ವ ಸಂಪತ್ಕರಾಯಚ ಸರ್ವಾರಿಷ್ಟ ವಿನಾಶಾಯ ನಿಂಬಪೂಟದಳ ಭಕ್ಷಣಂ ಎನ್ನುವಂತೆ ಬೇವು ನೂರು ವರ್ಷ ಆಯುಷ್ಯವನ್ನು ಸರ್ವ ಸಂಪತ್ತನ್ನು ನೀಡುವುದಲ್ಲದೆ ಎಲ್ಲ ಅನಿಷ್ಟಗಳನ್ನು ನಿವಾರಿಸುವುದು. ದೇಹಕ್ಕೆ ತಂಪು ನೀಡುವ ಬೇವು, ಉಪ್ಪು ಪ್ರಧಾನವಾದ ಬೆಲ್ಲ ಇವೆರಡರ ಮಿಶ್ರಣದಿಂದ ವಸಂತ ಋತುವಿನಲ್ಲಿ ಬರಬಹುದಾದ ಕಾಯಿಲೆಗಳನ್ನು ನಿವಾರಿಸ ಬಹುದು. ಬೇವು ವಿಷಾಹಾರಕವಾಗಿದೆ. ರೋಗಾಣುಗಳನ್ನು ಕೊಲ್ಲುತ್ತದೆ. ಇದನ್ನು ಎಣ್ಣೆಯ ರೂಪದಲ್ಲಿ, ಕ್ರಿಮಿನಾಶಕ, ಪೇಸ್ಟು, ಸೋಪು ಹಲ್ಲಿನಪುಡಿ ಈ ರೂಪಗಳಲ್ಲಿ ಬಳಸುತ್ತಾರೆ. ಬೆಲ್ಲು, ಶರ್ಕರ ಕಬ್ಬಿಣಾಂಶ ಹಿಮೋಗ್ಲೋಬಿನ್ ಮುಂತಾದ ಪೌಷ್ಟಿಕಾಂಶಗಳನ್ನು ಹೊಂದಿರುತ್ತದೆ. ಹೀಗೆ ಮನಸ್ಸನ್ನು ದೈಹಿಕ ಆರೋಗ್ಯವನ್ನು ವರ್ಧಿಸುವ ಸೂತ್ರವನ್ನು ಹೊಂದಿದೆ.

**ಸಂಕೇತಾರ್ಥದಲ್ಲಿ :**

ಜೀವನವೆಲ್ಲ ಬೇವು-ಬೆಲ್ಲ ಎರಡು ಸವಿಯುವವನೇ ಕರಿಮಲ್ಲ ಎಂಬ ಕುವೆಂಪು ಅವರ ವಾಣಿಯಂತೆ ಬೇವು ಅದರಕ್ಕೆ ಕಹಿ ಆದರೂ ಉದರಕ್ಕೆ ಸಿಹಿ. ಬೇವಿನ ಕಹಿಯ ಉಂಡಾಗ ಸಿಹಿಯ ಮಹತ್ವ ತಿಳಿಯುವುದು ಹಾಗೆ ಕಷ್ಟಗಳನ್ನು ಅನುಭವಿಸಿದಾಗ ಸುಖದ ಮಹತ್ವ ತಿಳಿಯುತ್ತದೆ. ಬೇವು-ಬೆಲ್ಲ, ನೋವು-ನಲಿವು, ಸುಖ-ದುಃಖ, ಪ್ರೀತಿ-ದ್ವೇಷ, ಲಾಭ-ನಷ್ಟ ಹಗಲು-ರಾತ್ರಿ, ಜ್ಞಾನ-ಅಜ್ಞಾನ ಇವುಗಳ ಸಂಕೇತ. ಭೂತಕಾಲದ ಕಹಿ ಅನುಭವಗಳು. ವರ್ತಮಾನದ ದಾರಿಗೆ ಭವಿಷ್ಯದ ಪ್ರಕಾಶಕ್ಕೆ ನಾಂದಿ. ಹೋಳಿ ಹುಣ್ಣಿಮೆ ಮತ್ತು ರಾಮನವಮಿಯ ಮಧ್ಯೆ ಬರುವ ಯುಗಾದಿ ಕಾಮದಿಂದ ರಾಮನತ್ತ ಸಾಗಲಿ.





**ಪ್ರಾದೇಶಿಕ ವೈವಿಧ್ಯ ಆಚರಣೆ :**

ಎಲ್ಲ ಕಡೆಗೂ ಹೊಸ ಬಟ್ಟೆ ಧರಿಸಿ ಸಾಯಂಕಾಲ ಚಂದ್ರನನ್ನು ನೋಡುವುದು, ಹಿರಿಯರಿಗೆ ನಮಸ್ಕರಿಸುವುದು ಈ ಆಚರಣೆ ನಡೆಯುತ್ತದೆ. ಅಂದು ನಸುಕಿನಲ್ಲಿ ಎದ್ದು ಅಭ್ಯಂಜನ ಮಾಡುವ ಸಿದ್ಧತೆ ನಡೆಯುತ್ತದೆ. ನೀರು ಒಲೆಯ ಮೇಲೆ ಇಟ್ಟ ಹಂಡೆಯಲ್ಲಿ ಚಳಮಳ ಕಾಯುವ ನೀರಿನಲ್ಲಿ ಬೇವಿನೆಲೆಗಳು ಕುದಿಯುತ್ತಿರುವ ದೃಶ್ಯ ಈಗ ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರ, ನೀರು ಒಲೆಯ ಜಾಗದಲ್ಲಿ ಬಾಯ್ಲರ್, ಗ್ಯಾಸ್, ಗೀಜರ್, ಸೋಲಾರ್ ವಾಟರ್ ಹೀಟರ್ ಬಂದಿವೆ. ಆದರೂ ಈ ನೀರನ್ನು ಬಕೇಟ್‌ನಲ್ಲಿ ಹಾಕಿ ಬೇವಿನ ಎಲೆ ಹಾಕಿ ಸ್ನಾನ ಮಾಡುವುದುಂಟು. ಎಣ್ಣೆ ಹಚ್ಚಿಕೊಂಡ ತಲೆಗೆ ಮೈಗೆ ತಂಪಾದ ಅನುಭವ ಸಿಗುತ್ತದೆ. ಮನೆಯ ಮುಂಬಾಗಿಲಿಗೆ ಮಾವಿನ, ಬೇವಿನ ಎಲೆಯ ತೋರಣಗಳಲ್ಲಿಯ ಎಲೆಗಳು ಸೋಕಿ ಬರುವ ಗಾಳಿ ತಂಪಾಗಿರುತ್ತದೆ. ಬೇವಿನ ಎಳೆ ಹೂಗಳನ್ನು ಆಯ್ದು ಇಟ್ಟುಕೊಂಡಿರುತ್ತಾರೆ. ಪುಟಾಣಿ ಹಿಟ್ಟಿಗೆ (ಹುರುಕಡ್ಲೆ) ಅಷ್ಟೇ ಪ್ರಮಾಣದ ಬೆಲ್ಲದ ಪುಡಿ, ಏಲಕ್ಕಿ ಲವಂಗ ಗೋಡಂಬಿ, ಬದಾಮಿ, ಒಣದ್ರಾಕ್ಷಿ, ಗಸಗಸೆ, ಗೇರುಬೀಜದ ಚೂರು ಮಿಶ್ರಣ ಅದಕ್ಕೆ ಬೇವಿನ ಹೂಗಳನ್ನು ಸೇರಿಸುತ್ತಾರೆ. ಹೀಗೆ ಬೇವು ಬೆಲ್ಲ ಮಿಶ್ರಣವನ್ನು ಸೇವಿಸುವ ಸಂಪ್ರದಾಯ ಬಂದಿದೆ. ಉತ್ತರ ಕರ್ನಾಟಕದಲ್ಲಿ ಚಂದ್ರ ನೋಡಿದ ಮರುದಿನ ಹೂರಣದ ಹೋಳಿಗೆ, ಶಾವಿಗೆ ಪಾಯಸದೂಟ ಇರುವುದು. ಕಟಕುರೊಟ್ಟಿ, ಶೇಂಗಾ, ಬಟಾಣಿ, ಅಗಸಿ ಚಟ್ನಿ, ಕರಿಂಡಿ, ಕೆಂಪು ಮೆಣಸಿನಕಾಯಿ ಚಟ್ನಿ, ಗಟ್ಟಿ ಮೊಸರು ಈ ಊಟ ಹೋಳಿಗೆ ಊಟಕ್ಕಿಂತಲೂ ಸೊಗಸು. ಈಗಿನ ಉದ್ವೇಗದ ಬಿರುಸಿನ ಚಟುವಟಿಕೆಗಳ ದಿನಗಳಲ್ಲಿ, ಉದ್ಯೋಗ, ವ್ಯಾಪಾರ, ವಿದ್ಯಾರ್ಜನೆ ನಿಮಿತ್ತ ಊರು ತೊರೆದು ಬಂಧು ಬಳಗದಿಂದ ದೂರ ಇರುವವರು. ನಗರ ಜೀವನದ ಯಾಂತ್ರಿಕತೆಗೆ ಒಳಗಾದವರು. ಒಂದೇ ಕಡೆಯಲ್ಲಿ ಒಟ್ಟಾಗಿ ಸೇರಿ ಹಬ್ಬ ಆಚರಿಸುವುದನ್ನು ಮರೆತಿದ್ದಾರೆ.

ಇನ್ನೊಂದೆಡೆ ನಿತ್ಯ ನೂತನ ಪ್ರಕೃತಿಯ ಗಿಡಮರಗಳ ನಿರ್ನಾಮವನ್ನು ಕಂಡು ಕವಿ ಜಿ.ಎಸ್. ಶಿವರುದ್ರಪ್ಪನವರು ನೊಂದು ಹೀಗೆ ಹೇಳಿದ್ದಾರೆ.

ಯುಗಾದಿಗಳ ಹಾದಿಯಲ್ಲಿ
ಇದ್ದ ಮರವನ್ನೆಲ್ಲ ಯಾರೋ
ಕಡಿದಿದ್ದಾರೆ
ನೆರಳಿಲ್ಲ ಹಕ್ಕಿಗಳ ದನಿಯಿಲ್ಲ
ಬೆಟ್ಟ ಘಟ್ಟಗಳ ಮೈಯಲ್ಲಿ
ಹಸುರೇ ಇಲ್ಲ
ಬಿಸಿಲೋ ಬಿಸಿಲು
ಸುಡುವ ಬಿಸಿಲು
ಸರಕಾರ ಅಲ್ಲಲ್ಲಿ ನೆಟ್ಟಿರುವ ಈ
ಸಸಿಗಳೆಲ್ಲ ಬೆಳೆದು
ಹಸಿರು ಮೂಡುವುದಕ್ಕೆ
ಪ್ರಭವ ವಿಭವಗಳ
ಎಣಿಸುತ್ತ ಕಾಯೋಣವೇ
ಇನ್ನು ಮುಂದಕ್ಕೆ ?

ಎಂದು ಕವಿ ಜನತೆಯ ಅಳಲನ್ನು ತೋಡಿದ್ದಾರೆ.

ಏನೇ ಆದರೂ, ನಿರಂತರ ಸುತ್ತುತ್ತಿರುವ ಈ ಜಗತ್ತಿನಲ್ಲಿ ಹೊಸದನ್ನು ಕಾಣುವ ನಾವು ಹೊಸತನ್ನು ಹುಡುಕುತ್ತ ಹೊಸ ಹೊಸ ವೈಜ್ಞಾನಿಕ ತಾಂತ್ರಿಕ ಆವಿಷ್ಕಾರಗಳಿಂದ ಪ್ರಗತಿಯತ್ತ ಸಾಗುತ್ತಿದ್ದೇವೆ. ಆದರೆ ನಮ್ಮ ಸುತ್ತಲಿರುವ ಹಸಿವೆಯಿಂದ ನರಳುತ್ತಿರುವವರಿಗೆ ಲಕ್ಷ್ಯ ವಹಿಸಿದ್ದೇವೆಯೇ ಎಂಬ ಪ್ರಶ್ನೆ ಕಾಡುತ್ತಿದೆ. ಧರ್ಮ ಜಾತಿ ಮತ ಇವುಗಳ ಸಂಕುಚಿತ ಆವರಣದಲ್ಲಿ ಪ್ರಾದೇಶಿಕತೆ ಪ್ರತ್ಯೇಕತೆ ಉಂಟಾಗಿ ನಮ್ಮತನವನ್ನೇ ಮರೆತು ಘರ್ಷಣೆ ಗಲಭೆಗಳಿಗೆ ತುತ್ತಾಗಿದ್ದೇವೆ. ಹೃದಯ ಸಂಕುಚಿತವಾಗಿ ಮನ ಕುಗ್ಗಿದೆ. ಕಿರಿದಾಗಿದೆ. ಸಹಜೀವನ, ಸಹಕಾರ ಕಣ್ಮರೆಯಾಗಿದೆ. ಬದುಕು ಅತೃಪ್ತಿ ಅಶಾಂತಿ ಅವಿಶ್ವಾಸಗಳಿಂದ ಕೂಡಿದೆ.

ಮಾನವ ಮಾನವರಲ್ಲಿ ಪ್ರೀತಿ ದಯೆ ಅಂತಃಕರಣ ವಿಶ್ವಾಸ ಉದಿಸುವಂತೆ, ಕೂಡಿ ಜೀವಿಸುವ ಸಂಕುಚಿತ ಭಾವನೆಗಳನ್ನು ತ್ಯಜಿಸುವ ಮಾನವ ಕುಲಕ್ಕೆಲ್ಲ ಸದ್ಭಾವನೆಯನ್ನು ಬಿತ್ತರಿಸುವ ಸಂದೇಶ ಯುಗಾದಿ ಹಬ್ಬ. ಉದ್ಯೋಗದ ಖಾಸಗೀಕರಣ, ಬಹುರಾಷ್ಟ್ರೀಯ ಕಂಪನಿಗಳ ಕಾರ್ಯಶೈಲಿ ಇಂಥ ಆಚರಣೆಗಳನ್ನು ಕಡಿಮೆಗೊಳಿಸಲು ಕಾರಣವಾಗಿದೆ. ಯುಗಾದಿಯ ಬೇವು ಬೆಲ್ಲವನ್ನು ಸಮಭಾವದಿಂದ ಎಲ್ಲರೂ ಹಂಚಿಕೊಳ್ಳೋಣ. ಏನೇ ಆದರೂ ಯುಗಾದಿ ಮತ್ತೆ ಮರಳಿ ಬರುತಿದೆ. ❑

## STATEMENT OF OWNERSHIP
## PARTICULARS ABOUT 'SIDDAGANGA'

FORM IV (See Rule 5)

| | | |
|---|---|---|
| Place of Publication | : | **SIDDAGANGA (Regd.)**<br>Siddaganga Math.<br>Tumkur District - 572 104. |
| Periodicity of its Publication | : | **Monthly** |
| Printer's Name | : | **Sree Sree Shivakumara Swamigalu** |
| Whether Citizen of India | : | Indian |
| Address | : | **Sree Siddalingeshwara Swamy Offset Printing Press,**<br>Sree Siddaganga Math,<br>Tumkur District - 572 104. |
| Publisher's Name | : | **Sri H.B. Gangadharaiah** |
| Whether Citizen of India | : | Indian |
| Address | : | **Publisher**<br>Old Students Association,<br>Sree Siddaganga Math,<br>Tumkur District - 572 104. |
| Editor's name | : | **Sri H.V. Veerabhadraiah** |
| Nationality | : | Indian |
| Address | : | **Editor,** 'Siddaganga'<br>Sree Siddaganga Math,<br>Tumkur District - 572 104. |

I, H.B. Gangadharaiah hereby declare that the particulars given above are true to the best of my knowledge and belief.

Bangalore
Date : 1-3-2010

**H.B. Gangadharaiah**
Signature of Publisher





## ಸಹನೆ ಕಳೆದುಕೊಳ್ಳದಿಹುದೇ ಸಮತೆ

–ಸ.ರಾ. ಸುಳಕೂಡೆ *

ಮಾನವ ಬದುಕಿನ ಆಳ ವಿಸ್ತಾರ ವಿಶಾಲತೆ ಪಡೆದುಕೊಂಡಂತೆ ಬಹಿರಂಗದಲ್ಲಿ ಕಂಡು ಬಂದರೂ ಅಂತರಂಗದಲ್ಲಿ ತಳಮಳ, ತಡಪಡಿಕೆ, ಚಡಪಡಿಕೆ, ಸಂಕುಚಿತ ಸ್ವಭಾವ, ಸಂಚು–ದ್ವೇಷದ ಆಗರವೇ ಹರವಿಕೊಂಡಿದೆ. ತಳಮಳ, ಚಡಪಡಿಕೆಗಳೆಲ್ಲವೂ ಅಮಾನುಷ್ಯದ ಅತಿರೇಕಗಳಾಗುತ್ತಿವೆ. ಹೀಗಾಗಿ ಮಾನವ ಲೋಕ ಮನುಷ್ಯ ಹಗರಣದ ಅವತರಣಿಕೆ ಯಾಗುತ್ತಲಿದೆ. ಎಲ್ಲಿ ನೋಡಿದಲ್ಲಿ ಕಲಹಗಳ ಕಲರವವಿದೆ, ಕಿತ್ತಾಟದ ಝೇಂಕಾರವಿದೆ. ಸರಳ ನಡೆ–ನುಡಿ ಅವಿರಳ ವಾಗಿವೆ, ಅವಕಾಶರಹಿತವಾಗಿವೆ. ನವ ಚೇತನದೊಳಗೆ ಚಿಮ್ಮುವ ಹುಮ್ಮಸ್ಸು ಹೊರಹೊಮ್ಮಲು ಸೂಕ್ತ ಪರಿಸರವಿಲ್ಲ. ಸಂಶಯ, ತಿರಸ್ಕಾರ, ಮತ್ಸರ, ಅಸೂಯೆಗಳೆಲ್ಲ ಮಾನವ ಸಹೃದಯಕ್ಕೆ ಅಘೋರ ಯಾತನೆಯನ್ನು ನೀಡುತ್ತಲಿವೆ. ಪರ ಪೀಡನೆಯ ಪರಾಕಾಷ್ಠೆ ಮಾನವ ಬದುಕಿನಲ್ಲಿ ಹಾಸು ಹೊಕ್ಕಾಗುತ್ತಿದೆ. ದಟ್ಟವಾಗುತ್ತಲಿದೆ. ಯಾರಿಗೂ ಪರಹಿತ, ಪರೋಪಕಾರ ಅರಗಿಸಿಕೊಳ್ಳಲಾರದ ಸಂಗತಿಯಾಗಿದೆ. ಮಾನವ ಮನದೊಳಗೆ ಭಯಂಕರ ಧೂರ್ತತನ, ವಿಷಮತೆ, ವಿದ್ರೋಹ, ದಬ್ಬಾಳಿಕೆ, ತುಂಬಿಕೊಂಡ ಪರಿಣಾಮವಾಗಿ ಹಿಂಸಾವೃತ್ತಿಗೆ ಕಡಿವಾಣ ಇಲ್ಲದಾಗಿದೆ.

ಜಗತ್ತು ಅನೇಕ ಕೌತುಕಗಳನ್ನು ಕಂಡಿದೆ, ಕಾಣಲು ತವಕಗೊಂಡಿದೆ. ಜಗದ ಬದುಕು ಝುಗಝುಗಿಸಬೇಕು, ಇಮ್ಮಡಿ–ಮುಮ್ಮಡಿ ಪ್ರಗತಿಯನ್ನು ಸಾಧಿಸಬೇಕೆಂಬ ಹಂಬಲ ಹೊತ್ತ ಹಲವು ವಿಜ್ಞಾನಿಗಳು, ಸಮಾಜದ ಹಿತ ಚಿಂತಕರು, ಕೃಷಿಕರು, ವಿಚಾರವಾದಿಗಳು, ಅವಿರತ ಶ್ರಮಿಸುತ್ತಿದ್ದಾರೆ. ಅವರ ಪರಿಶ್ರಮದ ಫಲವಾಗಿ ಮಾನವ ಬದುಕಿನ ಕೊರತೆ, ಕೊರಗುಗಳು ನಿವಾರಣೆಗೊಳ್ಳುವಷ್ಟು ಸಬಲತೆ ತುಂಬುತ್ತಲಿದೆ. ವಾಸ್ತವ ಮಾನವ ಬದುಕು ಸವಲತ್ತು, ಸಲಕರಣೆ, ಸಂಪರ್ಕ ಸಾಧನೆ, ವೈದ್ಯಕೀಯ ಸೇವೆ... ಎಲ್ಲವನ್ನು ಗಳಿಸಿಕೊಂಡಿದೆ. ವಿಶ್ವವೇ ಒಂದು ಚಿಕ್ಕ ಹಳ್ಳಿಯಾಗಿ ಮಾರ್ಪಟ್ಟಿರುವ ಇಂದಿನ ದಿನಮಾನಗಳಲ್ಲಿ ನೆರೆಹೊರೆ ಅಪರಿಚಿತವಾಗತೊಡಗಿರುವುದು ವಿಸ್ಮಯವಲ್ಲ. ಮನುಷ್ಯ ಭಯಭೀತನಾಗಿದ್ದಾನೆ. ತನ್ನ ಇರುವಿಕೆಗೆ ನಂಬಿಗಸ್ಥ ಪರಿಸರವಿಲ್ಲೆಂದು ಅಲ್ಲಸಲ್ಲದ ವ್ಯವಹಾರ, ಕುತ್ಸಿತ ಬುದ್ಧಿಯಿಂದ ಭ್ರಮಿತನಾಗಿದ್ದಾನೆ. ಭಿನ್ನನಾಗಿದ್ದಾನೆ. ತನ್ನದೆನ್ನುವುದನ್ನು ದೋಚುವವರಿದ್ದಾರೆ, ಕಸಿದುಕೊಳ್ಳುವವರಿದ್ದಾರೆಂಬ ಸತತ ಆತಂಕದೊಳಗೆ ಮುಳುಗಿರುವ ಮನುಷ್ಯ ಹೊಂಚು ಹಾಕಿಕೊಂಡು ಅವಕಾಶ ಸಿಕ್ಕಾಗಲೆಲ್ಲಾ ಮೃಗತ್ವದ ಎಲ್ಲ ಅವಗುಣಗಳನ್ನು ಕಾರ್ಯಗತಗೊಳಿಸುತ್ತಿದ್ದಾನೆ. ನಾಗರೀಕತೆ ಎಲ್ಲ ಸೊಬಗು, ಸೊಗಸಿನೊಳಗೆ ನಯವಂಚಕತನವು ಎಲ್ಲ ಕಾಲದ ಸುಮನಸ್ಸುಗಳನ್ನು ಬೆಚ್ಚಿ ಬೀಳಿಸುತ್ತಲಿದೆ. ಮಧುರ ಬಾಂಧವ್ಯದ ಸುಮಧುರ ಮಾನವ ಬದುಕು ಕಟ್ಟುವ ಸಾಹಸಗಳಿಗೆ ಹಿನ್ನಡೆಯನ್ನು ಹೊಂದುವಂತೆ ಮಾಡಲಾಗುತ್ತಿಲ್ಲವೇ?

ಮನುಷ್ಯ ಬಾಳು, ನೆಮ್ಮದಿ, ಸುಖ, ಶಾಂತಿ, ಸಹಕಾರ ಯುಕ್ತ ಒಬ್ಬರೊಬ್ಬರಲ್ಲಿ ವಿಶ್ವಾಸ, ಪ್ರೀತಿ ಪರಿಣಾಮಕಾರಿಯಾಗಿ ಹಬ್ಬಬೇಕೆಂದು ವಿಶ್ವದಾದ್ಯಂತ ವಿಶ್ವಭ್ರಾತೃತ್ವದ ಸಂದೇಶ ಸಾರಲಾಗಿದೆ. ಮನುಕುಲದ ಉಳಿವಿಗಾಗಿ ಯುದ್ಧ, ಕಾಳಗ, ಕಲಹ ಭಯೋತ್ಪಾದನೆ, ಶೋಷಣೆ, ದಬ್ಬಾಳಿಕೆ, ದಂಡೆತ್ತು ಹೋಗುವಿಕೆ ಎಲ್ಲವನ್ನು ನಿಗ್ರಹಿಸಲು ಸೂಕ್ತ ಕಾನೂನು ಕಟ್ಟಳೆಗಳನ್ನು ಜಾರಿಗೊಳಿಸಲಾಗಿದೆ. ವಿಶ್ವ ಮಾನವ ಹಕ್ಕುಗಳು ಒಂದು ಅರ್ಥದಲ್ಲಿ ಮನುಕುಲದ ಶ್ರೇಯಸ್ಸಿನ ಹಕ್ಕುಗಳೇ ಆಗಿವೆ. ಜಗತ್ತಿನ ಪ್ರತಿಯೊಬ್ಬ ಮನುಷ್ಯ ತನ್ನ ಏಳ್ಗೆಗೆ ಸಾಧನೆ, ಸೌಕರ್ಯಕ್ಕೆ ಹಕ್ಕುದಾರನಾಗಿರುವುದರ ಜೊತೆಗೆ ತನ್ನ ಪರಿಸರ ಶಾಂತಿ, ನೆಮ್ಮದಿಯಿಂದ ಕೂಡಿಕೊಂಡಿರುವಂತೆ ಶ್ರಮಿಸಲು ಅವಕಾಶ ಕಲ್ಪಿಸಲಾಗಿದೆ. ಯಾವುದೇ ಅಧೈರ್ಯ, ಅಳಕು, ಅಂಜಿಕೆ, ಬಾಹ್ಯ ಹಸ್ತಕ್ಷೇಪವಿಲ್ಲದಂತೆ ನೋಡಿಕೊಳ್ಳುವ ಆಪತ್ತಿನ ಕಾಲದಲ್ಲಿ ಸಹಾಯ ಹಸ್ತ ಚಾಚುವ ಸಾರ್ವಜನಿಕ ವ್ಯವಸ್ಥೆ

* 1319, ಶಿವಪ್ರಸಾದ, ಶ್ರೀ ಬಸವೇಶ್ವರ ಬಡಾವಣೆ, ರಾಮತೀರ್ಥ ನಗರ, ಬೆಳಗಾವಿ ಜಿಲ್ಲೆ–590 016.

ನಿರ್ಮಾಣಗೊಂಡಿದೆ. ಇಷ್ಟೆಲ್ಲ ವ್ಯವಸ್ಥೆಗಳ ನಡುವೆಯೂ ಮಾನವ ಭಯಭೀತನಾಗಿದ್ದಾನೆ, ಭಯಗ್ರಸ್ತನೂ ಆಗಿದ್ದಾನೆ. ಭಯೋತ್ಪಾದನೆಯ ಸಂಚಾಲಕನೂ ಆಗಿದ್ದಾನೆ. ಮಾನವ ನಷ್ಟು ನೀಚತನಕ್ಕಿಳಿದ ಪ್ರಾಣಿ ಇನ್ನೊಂದಿಲ್ಲ ಎಂಬ ಪ್ರತೀತಿ ಇಂದು ಜನಜನಿತಗೊಂಡಿದೆ. ಸಂಪತ್ತು, ಸವಲತ್ತು, ಅಧಿಕಾರ, ಅಂತಸ್ತು, ಜಾತಿ, ಪ್ರತಿಷ್ಠೆ-ಬಾಹುಳ್ಯ, ಧರ್ಮ ಪ್ರಸಾರ ಮತಾಂತರ ಮುಂತಾದ ವಿಪರೀತಗಳನ್ನೇ ಬದುಕೆಂದು ಹೊರಟಿರುವ ಮಾನವನಿಗೆ ಸಂಯಮ, ಸಮತೆಯ ಸೂತ್ರದ ಅರ್ಥ ಅನುಕೂಲವೆನ್ನಿಸಿಲ್ಲ. ತಾಳ್ಮೆಗೆಟ್ಟು ಅನೀತಿಯನ್ನೇ ನಂಬಿ ಮುನ್ನಡೆದಿರುವ ಮಾನವನಿಗೆ ತಿಳಿ ಹೇಳುವ ತಾಕತ್ತು ಯಾವ ಕ್ಷೇತ್ರಕ್ಕೂ ಸಿಗುತ್ತಿಲ್ಲವೆಂದೇ ಹೇಳಬಹುದು!

ಮಾನವ ಲೋಕವನ್ನು ಸುವ್ಯವಸ್ಥಿತ ಸ್ವಾವಲಂಬಿ ಮತ್ತು ಸಮತೆಯಿಂದ ಒಗ್ಗೂಡಿಸಿ ನಡೆಸಿದ ಶ್ರೇಯಸ್ಸು ಬಸವಾದಿ ಶರಣರಿಗೆ ಸಲ್ಲುತ್ತದೆ. ಅವರಲ್ಲಿ ಮಾನವ ಮಮತೆ ಸಹಜ ವಾಗಿ ಸರಳವಾಗಿ ಒಡಮೂಡಿದ್ದರಿಂದ 'ಸಮಾನತೆ' ಸಾಧಿಸುವುದು ಸುಲಭವಾಯಿತು. ಸಮಾಜದಲ್ಲಿ ರಕ್ತಗತ ವಾಗಿದ್ದ ಗುಂಪುಗಾರಿಕೆಯನ್ನು ಗುರುತಿಸಿದ ಶರಣರು ಕಾಯಕ, ದಾಸೋಹ ಮತ್ತು ಅನುಭಾವದ ಮೂಲಕ ಸಕಲರಲ್ಲಿ ಸಮತೆ ತಂದರು, ಸ್ವಾವಲಂಬಿ ಬದುಕಿಗೆ ನಾಂದಿ ಹಾಡಿ ಕಾಯಕವೇ ಕೈಲಾಸ, ಸತ್ಯ ನುಡಿವುದೇ ಸ್ವರ್ಗ, ಮಿಥ್ಯ ನುಡಿವುದು ಮೃತ್ಯುಲೋಕವೆಂದು ಸಾರಿದರು. ಕಳ್ಳರಲ್ಲೂ ಸಂಗಮನಾಥನ ಕಂಡ ಶರಣರು ಅದ್ವಿತೀಯ ತಾಳ್ಮೆಯ ಸಾಕಾರಮೂರ್ತಿಗಳಾಗಿ ನಮ್ಮ ಮುಂದೆ ಇದ್ದಾರೆ. ಜಗತ್ತಿನ ತಾಪತ್ರಯ ಬಗೆಹರಿಸಿಕೊಳ್ಳಲು ಕಾಯಕವೇ ತಾರಕ ಮಂತ್ರವಾಗಿ, ತಾಳ್ಮೆ ಸಮತೆಯ ಸೂತ್ರವಾಗಿ ಇಂದಿಗೂ ಪ್ರಸ್ತುತವಾಗಿಲ್ಲವೇ ?

ಬಸವಾದಿ ಶರಣರ ಒಂದೊಂದು ವಚನ ಸಮತೆ ಸ್ಥೈರಣೆಯ ಬೆಳಗುಗಳಾಗಿವೆ, ಹೃದಯ ಸಂಪತ್ತಿನ ಸಾರಗಳಾಗಿವೆ. ಅವರ ದಾರಿಯು ಸರ್ವ ಅವಗುಣಗಳನ್ನು ಕಳೆಯುವ ಸಾಧನಗಳಾಗಿವೆ. ಜಗದೊಳಗೆ, ನೆಮ್ಮದಿ, ಸುಖ, ಶಾಂತಿ ನೆಲೆಸಲು ಶರಣರ ಮಾರ್ಗವು ಸಶಕ್ತವಾದ ನೆಲೆ ಯಾಗಿದೆ, ಕಲೆಯಾಗಿದೆ, ಕರ್ತವ್ಯವೂ ಆಗಿದೆ, ನುಡಿದಂತೆ ನಡೆಯುವುದಾಗಿದೆ.

*ತಾಪ ತಾಳಿಕೊಳ್ಳುವುದೇ ತಪ,*
*ಗುರಿಯನ್ನು ನೆನೆದುಕೊಳ್ಳುವುದೇ ಸಮತೆ,*
*ಸಹನೆ ಕಳೆದುಕೊಳ್ಳದಿಹುದೇ ಸಮಾಧಿ,*
*ಸಮತೆಯ ಸ್ಥಿರೀಕರಣವೇ ಸಮಾಧಿ,*
*ಆಗು ಹೋಗುಗಳಿಂದ*
*ಬೆಂಡಾಗದಿಹುದೇ ಯೋಗ ಕಾಣೆ ಭೋ !*
*ಸ್ವತಂತ್ರಧೀರ ಸಿದ್ಧೇಶ್ವರನು*
*ಹುಟ್ಟಿಸಿದಲ್ಲಿ ಹುಟ್ಟಿ,*
*ಇಟ್ಟಂತೆ ಇದ್ದು,*
*ಕೊಟ್ಟುದ ಮೆದ್ದು, ಕೊಡದಿಹುದ ಗೆದ್ದು*
*ಮಾಡಿಯೂ ಮಾಡದೊಲು,*
*ಭೋಗಿಸಿಯೂ ಭೋಗಿಸದೊಲು ಇದ್ದು,*
*ಇದ್ದೂ ಹೊದ್ದದಂತಿಹುದೆ*
*ಪರಮಾರ್ಥ ಕಾಣೆ ಭೋ !*

ಕವಿ-ವಚನಕಾರ ಸಿದ್ದಯ್ಯ ಪುರಾಣಿಕರ ಈ ವಚನ ಸಮತೆಗೆ ಕಳೆ ಕಟ್ಟಿದೆ. ಬದುಕು, ವೈವಿಧ್ಯಮಯ ಮಿಶ್ರಣ ವಾಗಿದ್ದರೂ ಮಾನವ ತನ್ನಿರುವಿನಲ್ಲಿ 'ಅಹಂ' ಬಿಟ್ಟು ಬದುಕಲು ಕಲಿಯಬೇಕು. ಇಂಥ ಮನೋಧರ್ಮದಲ್ಲಿ ಸಮತೆ ಪ್ರಫುಲ್ಲವಾಗಿ ಪಲ್ಲವಿಸುತ್ತದೆ, ಪರಿಣಾಮಕಾರಿ ಯಾಗಿರುತ್ತದೆ. ಸಮತೆ, ತಾಳ್ಮೆ, ಅಂತಃಕರಣವನ್ನು ಹೆಚ್ಚಿಸುತ್ತವೆ. ಅಂತಃಕರಣ ಸಮತೆಯ ಪ್ರಬಲ ಮಿತ್ರವಾಗಿದೆ. ಈ ಮೈತ್ರಿಯೇ ಜಗದಿರುವಿಗೆ ರಂಗು ತರುತ್ತದೆ, ಶಾಂತಿಯ ಸುಧೆಯ ಸವಿಯಲು ಸಕಲರಿಗೂ ಅವಕಾಶ ಸಿಗುವಂತೆ ಮಾಡುತ್ತದೆ. ಸಹನೆಯೇ ಮಾನವ ಬದುಕಿನ ತಳಹದಿ ಯಾಗಿದೆ. ಇದೇ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿ ಗಳವರ ಬದುಕಿನ ಸಂದೇಶವಾಗಿದೆ. □

**ಮನುಷ್ಯ ಸದಾ ತನ್ನನ್ನು ವಿಮರ್ಶಿಸಿಕೊಳ್ಳುತ್ತಿರಬೇಕು. ಯಾವಾಗ ಮನುಷ್ಯ ತನ್ನನ್ನು ತಾನು ಸುಧಾರಿಸಿಕೊಳ್ಳುವನೋ ಆಗ ಮಾತ್ರ ತಾನು ಯೋಗ್ಯನಾಗಿ ಬಾಳಿ ಜಗತ್ತಿನಲ್ಲಿ ಪ್ರೇಮದ ಬಾಳನ್ನು ಬಾಳುವುದು ಸಾಧ್ಯವಾಗುವುದು.**

**-ಶ್ರೀವಾಣಿ**





# ಭಗವಾನ್ ಮಹಾವೀರ ಜೀವನ ಮತ್ತು ಸಂದೇಶ

-ಡಾ॥ ಎಸ್.ಸಿ. ಪದ್ಮಪ್ರಸಾದ್*

'ಜೈನಧರ್ಮದ ಪುನರುತ್ಥಾನಕಾರನಾದ ಮಹಾವೀರನು ಕ್ರಿ.ಪೂ. ಆರನೆಯ ಶತಮಾನದಲ್ಲಿ (ಕ್ರಿ.ಪೂ.599-527) ಜೀವಿಸಿದ್ದವನು. ಆ ಕಾಲವು ಇಡೀ ಜಗತ್ತಿನಲ್ಲಿ ಆಧ್ಯಾತ್ಮ ಹಾಗೂ ತಾತ್ವಿಕತೆಯ ಹಲವು ಅಲೆಗಳು ಏಕಕಾಲಕ್ಕೆ ಮೂಡು ತ್ತಿದ್ದುದಕ್ಕೆ ಸಾಕ್ಷಿಯಾಗಿದ್ದ ಸಮಯ.

ಆ ಕಾಲದಲ್ಲಿ ಭಾರತದ ಪಾವನ ಭೂಮಿಯಲ್ಲಿ ಹಲವು ಮಂದಿ ಉಪಷತ್‌ಕಾರರು ಉದಯಿಸಿದರು. ಬುದ್ಧ, ಮಹಾವೀರರು ಜನಿಸಿ ಹೊಸ ತತ್ವ ಪ್ರಣಾಲಿಗಳನ್ನು ಹರಡಿದರು. ಇದೇ ವೇಳೆಯಲ್ಲಿ ಗ್ರೀಸ್‌ನಲ್ಲಿ ಸುಕರಾತ, ಪರ್ಶಿಯಾದಲ್ಲಿ ಜರತುಷ್ಟ, ಚೀನಾದಲ್ಲಿ ಲಾವೋತ್ಸೆ ಮತ್ತು ಕನ್‌ಫ್ಯೂಷಿಯಸ್, ಪ್ಯಾಲಸ್ಟೇನಿನಲ್ಲಿ ಯಹೂದಿ ತಾತ್ವಿಕರು ಹೊಸ ಚಿಂತನೆಗಳನ್ನು ಹರಿಬಿಟ್ಟಿದ್ದರು. ಅವುಗಳ ಪ್ರಭಾವ ಜನರಲ್ಲಿ ಹರಡಿಕೊಳ್ಳುತ್ತಿತ್ತು.

ಈಗ ಗಮನಿಸಬೇಕಾದ ಸಂಗತಿ ಇದು-ಹಾಗೆ ಏಕಕಾಲ ದಲ್ಲಿ ಚಿಮ್ಮಿ ಹರಿಯತೊಡಗಿದ ಸೈದ್ಧಾಂತಿಕ ತೊರೆಗಳಲ್ಲಿ ಇಂದು ಕೆಲವು ಮಾತ್ರವೇ ಜೀವಂತವಾಗಿವೆ. ಅವುಗಳ ಪೈಕಿ ಬೌದ್ಧಮತ ಹಾಗೂ ಉಪನಿಷತ್ ಪ್ರಣೀತ ವೈದಿಕ ಸಿದ್ಧಾಂತವನ್ನು ಬಿಟ್ಟರೆ ಉಳಿದೆಲ್ಲವೂ ಕಡಿಮೆ ಸಂಖ್ಯೆಯ ಅನುಯಾಯಿಗಳನ್ನು ಹೊಂದಿರುವಂಥವೇ, ಇವುಗಳಲ್ಲಿಯೇ ಹೆಚ್ಚು ಅನುಯಾಯಿಗಳನ್ನು ಹೊಂದಿರುವಂಥದು ಎಂದರೆ ಬಹುಶಃ ಮಹಾವೀರ ಪ್ರಣೀತ ಜೈನಧರ್ಮವೇ.

**ಜೀವನ ವಿವರ :**

ಮನುಷ್ಯನಾಗಿಯೇ ಹುಟ್ಟಿ ಭಗವಂತನ ಹಂತಕ್ಕೆ ಏರಿನಿಂತ ಮಹಾವೀರ ಜೈನ ಸಂಪ್ರದಾಯದ ಕಾಲಗಣನೆಯ ಪ್ರಕಾರ ಆ ಕಾಲ ಖಂಡದ 24ನೆಯ ತೀರ್ಥಂಕರ. (ಜೈನ ಕಾಲ ಗಣನೆಯ ಕ್ರಮದಲ್ಲಿ ಒಂದೊಂದು ಕಾಲ ಖಂಡವೂ ಅನೇಕ ಸಾವಿರ ವರ್ಷಗಳ ವಿಸ್ತಾರದ್ದು. ಅದರ ಒಂದು ನಿರ್ದಿಷ್ಟ ಭಾಗದಲ್ಲಿ ಮಾತ್ರ ಧರ್ಮದ ಪುನರುದ್ಧಾರಕರಾದ ತೀರ್ಥಂಕರರ ಜನ್ಮವಾಗುತ್ತದೆಂದು ಹೇಳಲಾಗಿದೆ. ಹಿಂದಿನ ಕಾಲಖಂಡದಲ್ಲಿ ಹಾಗೆ 24 ಜನ ತೀರ್ಥಂಕರರಾಗಿದ್ದು, ಪ್ರಸ್ತುತ ಕಾಲಖಂಡದಲ್ಲಿನ ಅಂಥ ತೀರ್ಥಂಕರರ ಪೈಕಿ ಗೊಮ್ಮಟೇಶನ ತಂದೆ ಆದಿನಾಥ ಅಥವಾ ವೃಷಭನಾಥ ಮೊದಲಿಗ. ಮಹಾವೀರ ಕೊನೆಯವನು. ಮುಂದಿನ ಕಾಲಖಂಡದಲ್ಲಿ ಪುನಃ ಇಂತಹ 24 ತೀರ್ಥಂಕರರು ಜನ್ಮತಾಳುತ್ತಾರೆಂದು ಜೈನಾಗಮಗಳು ಹೇಳುತ್ತವೆ.

ಬಿಹಾರ ರಾಜ್ಯದ ವೈಶಾಲಿ(ಈಗಿನ ವಸಾಢ್) ನಗರವು ಗಂಡಕೀ ನದಿಯ ಎರಡು ಪಕ್ಕದಲ್ಲಿದ್ದ ಅತಿದೊಡ್ಡ ನಗರ. ಆ ನಗರಕ್ಕೆ ಹಲವು ಉಪನಗರಗಳಿದ್ದವು. ಕುಂಡಪುರ/ ಕುಂಡಲಪುರ/ ಕುಂಡಗ್ರಾಮವೆಂಬುದು ಅಂಥ ಒಂದು ಉಪನಗರ. ಈ ಕುಂಡಗ್ರಾಮವನ್ನು ಈಗ 'ಬಾಸ್ಕುಂಡ್' ರಾಜರಂತೆ ಆಳುತ್ತಿದ್ದ ಪದ್ಧತಿ ಆಗ ವೈಶಾಲಿ ಪ್ರದೇಶದಲ್ಲಿತ್ತು. ಹಾಗೆ ಕುಂಡ ಗ್ರಾಮವನ್ನು ಆಳುತ್ತಿದ್ದ ದೊರೆಯ ಹೆಸರು ಸಿದ್ಧಾರ್ಥ. ಅವನ ರಾಣಿ ತ್ರಿಶಲಾ ಅಥವಾ ಪ್ರಿಯಕಾರಿಣಿ ದೇವಿ. ಈ ತ್ರಿಶಲಾದೇವಿ ಇಡೀ ವೈಶಾಲಿಗೆ ದೊರೆಯಾಗಿದ್ದ ಚೇಟಕ ಎಂಬ ರಾಜನ ಮಗಳು.

ಈ ಸಿದ್ಧಾರ್ಥರಾಜ-ತ್ರಿಶಲಾದೇವಿ ದಂಪತಿಗಳುಗೆ ಹುಟ್ಟಿದ ಮಗನೇ ವರ್ಧಮಾನ ಅಥವಾ ಮಹಾವೀರ. ಈತನ ಜನ್ಮದಿನ ಕ್ರಿ.ಪೂ. 599ನೇ ಇಸವಿಯ ಚೈತ್ರ ಶುದ್ಧ ತ್ರಯೋದಶಿ (ಅಂದರೆ ಆ ವರ್ಷದ ಯುಗಾದಿ ಹಬ್ಬ ಆದ ಹದಿಮೂರನೇ ದಿನ. ಅದು ಆ ವರ್ಷದ ಮಾರ್ಚ್ 30ಕ್ಕೆ ಸರಿ ಹೊಂದುತ್ತದೆ.)

ರಾಣಿ ತ್ರಿಶಲಾ, ತಾನು ಗರ್ಭ ಧರಿಸುವ ಪೂರ್ವದಲ್ಲಿ ಹದಿನಾರು ಶುಭಸ್ವಪ್ನಗಳನ್ನು ಕಂಡಳಂತೆ. ಆಕೆ ಲೋಕೋ ದ್ಧಾರನಾಗುವ ಮಗನನ್ನು ಪಡೆಯುವುದರ ಮುನ್ಸೂಚನೆ ಅದು ಎಂದು ನೈಮಿತ್ತಕರು ಹೇಳಿದರಂತೆ. ಮಹಾವೀರನು ತಾಯ ಗರ್ಭದಲ್ಲಿ ಬೆಳೆಯತೊಡಗಿದ ಕಾಲದಲ್ಲೇ ಅವನ

* ಪ್ರಾಚಾರ್ಯರು, ವಿದ್ಯಾವಾಹಿನಿ ಶಿಕ್ಷಣ ಕಾಲೇಜು, ಕುವೆಂಪುನಗರ, ತುಮಕೂರು -572 103.

ತಂದೆಯ ಸಿರಿ ಸಂಪತ್ತು ಶಾಂತಿಗಳು ಬೆಳೆಯತೊಡಗಿದವು. (ಮಹಾಪುರುಷರ ಜನ್ಮ ವಿಷಯದಲ್ಲಿ ಇದು ಆಶ್ಚರ್ಯವೇನಲ್ಲ. ಶ್ರೀರಾಮನ ಜನ್ಮಕಾಲದಲ್ಲೂ ಹೀಗೇ ಆಗಿತ್ತು ಎಂಬ ವಿಚಾರ ವಾಲ್ಮೀಕಿ ರಾಮಾಯಣದಲ್ಲಿ ಬರುತ್ತದೆ.) ಆದ್ದರಿಂದ ಆ ಮಗುವಿಗೆ ವರ್ಧಮಾನನೆಂದು ನಾಮಕರಣ ಮಾಡಿದರು. ಆ ಬಾಲಕ ಚಿಕ್ಕಂದಿನಲ್ಲೇ ಹಲವು ಶೌರ್ಯಕಾರ್ಯಗಳನ್ನು ಮಾಡಿದ್ದರಿಂದ ಅವನ ಶಕ್ತಿಯನ್ನು ಗಮನಿಸಿ ಅವನನ್ನು 'ಮಹಾವೀರ' ಎಂದೂ ಕರೆಯಲಾಯಿತು. ವಾಸ್ತವವಾಗಿ 'ಮಹಾವೀರ' ಎಂಬುದು ಗುಣವಾಚಕವೇ ಅದು ಅಂಕಿತನಾಮವಾಗಿ ಬದಲಾವಣೆಗೊಂಡಿದ್ದರ ಒಂದು ಅಪರೂಪದ ಉದಾಹರಣೆ. ಗೆಳೆಯರೊಡನೆ ಆಟವಾಡುತ್ತಿದ್ದಾಗ ಬಂದ ಒಂದು ಘಟಸರ್ಪವನ್ನು ಕೈಯಿಂದ ಎತ್ತಿ ದೂರ ಬಿಸುಟಿದ್ದು, ವೇಷ ಬದಲಿಸಿಕೊಂಡು ಬಂದಿದ್ದ ಸ್ವರ್ಗದ ದೇವತೆಯೊಬ್ಬ ಇವನನ್ನು ಹೆಗಲ ಮೇಲೇರಿಸಿ ಕೊಂಡು ದೊಡ್ಡದಾಗಿ ಬೆಳೆಯತೊಡಗಿದ ಅವನ ತಲೆಯ ಮೇಲೆ ಗುದ್ದಿ ಅವನ ನಿಜರೂಪ ಪ್ರಕಟವಾಗುವಂತೆ ಮಾಡಿದ್ದು – ಇವನ ಬಾಲಶೌರ್ಯದ ಬಗ್ಗೆ ಇರುವ ಕಥಾನಕ ಗಳಲ್ಲಿ ಕೆಲವು.

ಹಲವು ಪ್ರಾಚೀನ ಗ್ರಂಥಗಳಲಿ ಮಹಾವೀರ ವರ್ಧಮಾನನ ಬದುಕಿನ ಚಿತ್ರಣ ದೊರೆಯುತ್ತದೆ. 'ಭಗವತೀಯ'– ಎಂಬ ಕೃತಿಯಲ್ಲಿ ಮಹಾವೀರನ ಪಾರ್ಶ್ವ ಚಿತ್ರಣ ಒಂದಷ್ಟು ದೊರೆಯುತ್ತದೆ. ಆಚಾರಾಂಗ ಹಾಗೂ ಕಲ್ಪಸೂತ್ರಗಳಲ್ಲಿ ಮಹಾವೀರನು ಮುನಿಯಾಗಿ ತಪಸ್ಸು ಮಾಡುವ ಕಾಲದಲ್ಲಿ ಪಟ್ಟ ಬವಣೆಯ ವಿವರಗಳು ದೊರೆಯುತ್ತವೆ. ಅವೆಲ್ಲ ಆಕರಗಳಿಂದ ಮಹಾವೀರನ ಬದುಕನ್ನು, ಪ್ರಚುರಪಡಿಸಿದ ತತ್ವಗಳನ್ನು ಕುರಿತು ಸಾಕಷ್ಟು ವಿವರವಾಗಿಯೇ ತಿಳಿಯಬಹುದಾಗಿದೆ.

ವರ್ಧಮಾನ ಮಹಾವೀರನು ಜನ್ಮತಃ ಸಾಕಷ್ಟು ಜ್ಞಾನಸಂಪನ್ನನಾಗಿದ್ದ ಎಂಬುದಕ್ಕೂ ಹಲವು ಐತಿಹ್ಯಗಳು ಉಲ್ಲೇಖಿಸಲ್ಪಟ್ಟಿವೆ. ಆತನಿಗೆ ಎಂಟು ವರ್ಷವಾಗಿದ್ದಾಗ ವಿದ್ಯಾಭ್ಯಾಸಕ್ಕೆಂದು ಆಚಾರ್ಯರೊಬ್ಬರ ಬಳಿ ಕರೆದೊಯ್ಯಲಾಯಿತು. ಆಗ ಆ ಬಾಲಕನು ಆಚಾರ್ಯರಿಗೇ ವ್ಯಾಕರಣದ ಬಗೆಗೆ ಪ್ರಶ್ನೆಗಳನ್ನು ಕೇಳತೊಡಗಿದಾಗ ಅವರೇ ಚಕಿತಗೊಂಡು ಮೌನ ತಾಳಿದರು. ನಂತರ ಆ ಬಾಲಕನೇ ಅವನ ಆಸನದಲ್ಲಿ ಕುಳಿತು ವಿಷಯವನ್ನು ವಿವರಿಸತೊಡಗಿದ –ಎಂಬುದನ್ನು ಅಂತಹ ಒಂದು ಕತೆ. ಬಾಲ್ಯದಲ್ಲೂ ಪ್ರಖರ ಜ್ಞಾನವನ್ನು ಹೊಂದಿದವರ ಬಗೆಗಿನ ಸುದ್ದಿಗಳನ್ನು ನಾವೀಗಲೂ ಕೇಳುತ್ತಿರುತ್ತೇವೆ. ವರ್ಧಮಾನ ಹುಟ್ಟುತ್ತಲೇ ವ್ಯಾಕರಣ ತಿಳಿದಿದ್ದನೋ ಇಲ್ಲವೋ, ಆದರೆ ಜ್ಞಾನವನ್ನು ಹೀರಿ ನೆನಪಿಟ್ಟುಕೊಳ್ಳುವ, ವಿಭಿನ್ನವಾಗಿ ಯೋಚಿಸುವ ಪ್ರತಿಭೆ ಇದ್ದದ್ದು ಅಸಂಭವವೇನಲ್ಲ.

ಸುಪುಷ್ಟನಾಗಿ ಬೆಳೆದ ವರ್ಧಮನ ಮಹಾವೀರನಿಗೆ ಯೌವನ ಪ್ರಾಪ್ತವಾದಂತೆ ಮದುವೆ ಮಾಡುವ ಪ್ರಸ್ತಾಪ ಸಹಜವಾಗಿಯೇ ಬಂದಿತು. ಯಶೋದಾ ಎಂಬ ರಾಜಕುಮಾರಿಯೊಡನೆ ಮಹಾವೀರನ ವಿವಾಹವಾಗಿತ್ತೆಂದು ಶ್ವೇತಾಂಬರ ಸಂಪ್ರದಾಯದ ಕೆಲವು ಗ್ರಂಥಗಳಲ್ಲಿ ಬಂದರೆ, ಇತರ ಶ್ವೇತಾಂಬರ ಗ್ರಂಥಗಳಲ್ಲಿ ಹಾಗೂ ಯಾವ ದಿಗಂಬರ ಗ್ರಂಥದಲ್ಲಿಯೂ ಅವರ ವಿವಾಹದ ಉಲ್ಲೇಖ ಇಲ್ಲ.

ಇರಲಿ, ಒಬ್ಬ ಸಾಧಕ ಮದುವೆಯಾಗಿದ್ದನೋ ಇಲ್ಲವೋ ಎಂಬುದು ಅವನ ಸಾಧನೆಯಷ್ಟು ಮುಖ್ಯ ಸಂಗತಿಯೇನೂ ಅಲ್ಲ. ಆದರೆ ನಿರ್ವಿವಾದವಾದ ಸಂಗತಿ ಎಂದರೆ ಆತ ತನ್ನ ಮೂವತ್ತರ ತರುಣ ಪ್ರಾಯದಲ್ಲೇ ಸಂಸಾರವನ್ನು ತೊರೆದು ದೀಕ್ಷೆಪಡೆದುಕೊಂಡ ಎಂಬುದು. ಇದನ್ನು ಎರಡು ಸಂಪ್ರದಾಯದ ಜೈನಗ್ರಂಥಗಳು ಒಪ್ಪುತ್ತವೆ. ದೀಕ್ಷಾ ಪೂರ್ವ ಕಾಲದಿಂದಲೇ, ಅಂದರೆ–ಬಾಲ್ಯದಿಂದಲೇ ಹಲವು ವಿದ್ಯೆಗಳ ಸಾಧನೆ ಹಾಗೂ ತಾತ್ವಿಕ ಜಿಜ್ಞಾಸೆಯಲ್ಲಿ ತೊಡಗಿದ್ದ ಮಹಾವೀರರು ತಮ್ಮ ಜೀವನಕ್ಕೆ ಬೇಕಾದ ಮಾನಸಿಕ ಸಂಸ್ಕಾರ ಹಾಗೂ ಧೃಢತೆಯನ್ನು ಹೊಂದಿದ್ದವರು. ಜನರ ಜೀವನ ಸಂಕಷ್ಟಗಳಿಗೆ ಪರಿಹಾರ ಮಾರ್ಗವನ್ನು ಕಂಡು ಹಿಡಿಯಬೇಕೆಂಬ ಆಕಾಂಕ್ಷೆಯೇ ಅವರ ವೈರಾಗ್ಯದ ಮೂಲ.

ಈ ಆಂತರಿಕ ಅಭೀಪ್ಸೆಯಿಂದಲೇ ಮಹಾವೀರರು ಬಂಧು ಬಳಗದವರನ್ನು, ಮೃದು ಮಾತುಗಳಿಂದ ಸಂತೈಸಿ ದೀಕ್ಷೆ ತೆಗೆದುಕೊಳ್ಳಲು ಹೊರಟರು. ಕುಂಡಪುರದ ಹೊರಭಾಗ ದಲ್ಲಿದ್ದ ಜ್ಞಾತೃಖಂಡವೆಂಬ ಉದ್ಯಾನದಲ್ಲಿ ಕ್ರಿ.ಪೂ. 569ರ ಮಾಘಮಾಸದ ಹತ್ತನೆಯ ದಿನದಂದು ಅವರು ತಮ್ಮ ವಸ್ತ್ರಾಭರಣಗಳಾದಿಯಾಗಿ ಎಲ್ಲವನ್ನೂ ತ್ಯಜಿಸಿ, ತಲೆ ಕೂದಲನ್ನು ತಮ್ಮ ಕೈಯಿಂದಲೇ ಕಿತ್ತುಕೊಂಡು





(ಕೇಶಲೋಚನ) ದಿಗಂಬರ ದೀಕ್ಷೆಯನ್ನು ಸ್ವೀಕರಿಸಿದರು.

ಮುನಿ ಜೀವನ :

ದೀಕ್ಷೆ ಸ್ವೀಕರಿಸಿದಂದಿನಿಂದ ಕೇವಲ ಜ್ಞಾನ (Supreme Knowledge) ಪಡೆಯುವ ತನಕದ ಹನ್ನೆರಡು ವರ್ಷಗಳ ಅವಧಿ ಮಹಾವೀರರ ಬದುಕಿನ ಅತ್ಯಂತ ಸಂಕಷ್ಟದ ಕಾಲವಾಗಿತ್ತು. ಸಾಮಾನ್ಯವಾಗಿ ಕಾಡಿನಲ್ಲೇ ಧ್ಯಾನಮಗ್ನನಾಗಿರುತ್ತಿದ್ದ ಮಹಾವೀರರಿಗೆ ಶರೀರದ ಪರಿವೆಯೂ ಇರುತ್ತಿರಲಿಲ್ಲ. ಹಸಿವೆ ಹಾಗೂ ನಿತ್ರಾಣಗಳು ಗಮನಕ್ಕೆ ಬಂದಾಗ ಮಾತ್ರ ಸಮೀಪದ ಊರೊಳಕ್ಕೆ ಪ್ರವೇಶಿಸಿ ಅಲ್ಪಾಹಾರ ಸೇವಿಸುತ್ತಿದ್ದರು. ಮಳೆಗಾಲದ ನಾಲ್ಕು ತಿಂಗಳುಗಳ ಕಾಲ ಜೀವಿಗಳಿಗೆ ಹಿಂಸೆಯಾಗುತ್ತದೆಂದು ಸಂಚರಿಸದೆ ಒಂದೇ ಕಡೆ ನಿಲ್ಲುತ್ತಿದ್ದರು. (ಚಾತುರ್ಮಾಸದ ಆಚರಣೆ). ಉಳಿದ ಕಾಲಗಳಲ್ಲಿ ಪ್ರತಿ ನಾಲ್ಕಾರು ದಿನಗಳಿಗೊಮ್ಮೆ ಒಂದು ಸ್ಥಳ ದಿಂದ ಮತ್ತೊಂದಕ್ಕೆ ಸಂಚರಿಸಿ ಧ್ಯಾನವನ್ನು ಮುಂದುವರೆಸುತ್ತಿದ್ದರು. ಯಾವುದೇ ಸ್ಥಳದ ಬಗ್ಗೆಯೂ ಮುನಿಯಾದವನಲ್ಲಿ ಮೋಹ ಬೆಳೆಯಬಾರದೆಂಬುದು ಈ ನಿಯಮಕ್ಕೆ ಕಾರಣ.

ಹನ್ನೆರಡು ವರ್ಷಗಳ ಈ ನಿರಂತರ ಪರ್ಯಟಣೆ, ಧ್ಯಾನ, ಸಂಯಮದ ಸಾಧನೆಗಳಿಂದ ಪರಿಪಕ್ವಗೊಂಡ ಮಹಾವೀರರಿಗೆ ಕೊನೆಗೂ ಜ್ಞಾನೋದಯವಾಯಿತು. ಅದನ್ನು ಜೈನ ಪರಿಭಾಷೆಯಲ್ಲಿ ಕೇವಲ ಜ್ಞಾನ ಎನ್ನುತ್ತಾರೆ. ಮಹಾವೀರರ ನಲವತ್ತೆರಡನೆಯ ವಯಸ್ಸಿನಲ್ಲಿ, ಅಂದರೆ ಕ್ರಿ.ಪೂ. 557ರ ವೈಶಾಖ ಮಾಸದ ಹತ್ತನೆಯ ದಿನದಂದು ಬಿಹಾರದ ಋಜುಕೂಲಾ ನದಿಯ ತೀರದ ಪ್ರದೇಶವೊಂದರಲ್ಲಿ, ವಿಶಾಲವೃಕ್ಷದಡಿಯಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದಾಗ, ಒಮ್ಮಿಂದೊಮ್ಮೆಲೇ ಅವರ ಆತ್ಮವೇ ಅರಳಿದಂತೆ, ಶರೀರದ ಗ್ರಂಥಿಗಳೆಲ್ಲ ವಿಕಾಸಗೊಂಡಂತೆ ಕರ್ಮ ಸಂಕಲೆಗಳೆಲ್ಲ ಕಳಚಿದಂತೆ, ಮಹತ್ ಪ್ರಕಾಶವೊಂದು ಒಳಗಿನಿಂದಲೇ ಆವಿರ್ಭವಿಸಿ ಹೊರಸೂಸಿ ಹರಿದಂತೆ ಭಾಸವಾಗಿ, ತಮ್ಮನ್ನು ಕಾಡುತ್ತಿದ್ದ ಎಲ್ಲ ಪ್ರಶ್ನೆಗಳಿಗೂ ಉತ್ತರ ದೊರೆತಂತಾಯಿತು. ಇದನ್ನೇ ಕೇವಲ ಜ್ಞಾನ ಎನ್ನುವುದು. ಇಂತಹ ಜ್ಞಾನ ಪ್ರಾಪ್ತಿಯಾದವನಿಗೆ ಎಲ್ಲ ವಿಷಯಗಳೂ ತಂತಾನೇ ತಿಳಿಯುತ್ತವೆ. ಅದರಾಚೆ ಅವನು ತಿಳಿಯಬೇಕಾದ್ದು ಏನೂ ಇರುವುದಿಲ್ಲ. ಎಲ್ಲ ಕರ್ಮಗಳ ಸಂಕಲೆಯನ್ನು ಕಡಿದೊಗೆದವನಿಗೆ ಮಾತ್ರವೇ ಅದರ ಪ್ರಾಪ್ತಿ. ಆದ್ದರಿಂದಲೇ ಕೇವನ ಜ್ಞಾನದ ಪ್ರಾಪ್ತಿಯಾಯಿ ತೆಂದರೆ ಮೋಕ್ಷಪ್ರಾಪ್ತಿ ಖಚಿತವೆಂದೇ ಲೆಕ್ಕ !

ಅಂತಿಮ ದಿನಗಳು :

ಮೂವತ್ತು ವರ್ಷಗಳ ಕಾಲ ಹೇಗೆ ತಾನು ಸಾಕ್ಷಾತ್ಕರಿಸಿಕೊಂಡ ದರ್ಶನವನ್ನು ಪ್ರಚುರಪಡಿಸುತ್ತಾ ಮಹಾವೀರ ತೀರ್ಥಂಕರರು ವಿಹರಿಸಿದರು. ಹೆಚ್ಚು ಕಾಲ ಅವರು ಇಂದಿನ ಬಿಹಾರ್ ಪ್ರಾಂತ್ಯದಲ್ಲಿ ವಿಹರಿಸಿದ್ದರಿಂದಲೇ ಆ ಪ್ರದೇಶಕ್ಕೆ ಬಿಹಾರ್ ಎಂದು ಹೆಸರಾಯಿತೆಂದು ಜೈನರ ನಂಬಿಕೆ. ಅದೇ ರೀತಿ ಬಿಹಾರದಲ್ಲಿಯ 'ಬರ್‌ದ್ವಾನ್' ಎಂಬ ಜಿಲ್ಲೆಯು 'ವರ್ಧಮಾನ' ಎಂಬ ಹೆಸರಿನ ಜನಪ್ರಿಯ ರೂಪವೆಂದೂ, 'ವೀರಭೂಮಿ' ಎಂದು ಮಹಾವೀರರ ಹೆಸರಿನಿಂದ ಕರೆಯಲ್ಪಟ್ಟ ಸ್ಥಳವೇ ಈಗಿನ 'ಸಿಂಗಭೀಮ್' ಎಂದೂ ಹೇಳಲಾಗುತ್ತದೆ.

ಜಗತ್ತಿನ ಸುಖಶಾಂತಿಗೆ ಅಹಿಂಸೆಯೇ ಪರಮಧರ್ಮ ಎಂದೂ, ಅಪರಿಗ್ರಹವೇ ಅದಕ್ಕೆ ರಾಜಮಾರ್ಗವೆಂದೂ ಸಾರುತ್ತಾ ದೇಶದ ಹಲವಾರು ಕಡೆ ವಿಹಾರ ಮಾಡಿದ ಮಹಾವೀರರು ಅಪಾರ ಸಂಖ್ಯೆಯ ಅನುಯಾಯಿಗಳನ್ನು ಪಡೆದರು. ಬ್ರಾಹ್ಮಣ ವಿದ್ವಾಂಸರಾದ ಇಂದ್ರಭೂತಿ, ರಾಜಗೃಹದ ಅರಸನಾದ ಬಿಂಬಸಾರ (ಶ್ರೇಣಿಕ), ಮೊದಲಾದ ಹಲವು ಪ್ರಥಮ ಶ್ರೇಣಿಯ ಜನ ಇವರ ಶಿಷ್ಯರಾದರು. ಇವರಿಂದ ಉಪದೇಶಿತವಾದ ಧರ್ಮವೇ ಜೈನ ಧರ್ಮ ಎನ್ನಿಸಿಕೊಂಡಿತು. ವಾಸ್ತವವಾಗಿ ಅದು ಹೊಸ ಧರ್ಮವೇನಾಗಿರಲಿಲ್ಲ. ಇವರಿಗಿಂತ 250 ವರ್ಷಗಳಷ್ಟು ಹಿಂದೆ, ಕ್ರಿ.ಪೂ. 8ನೆಯ ಶತಮಾನದಲ್ಲೇ ವಾರಣಾಸಿಯಲ್ಲಿ (ಬಾಳಿದ್ದ) 23ನೆಯ ತೀರ್ಥಂಕರರಾಗಿ ಖ್ಯಾತರಾಗಿದ್ದ ಜೀವಿಸಿದ್ದ ಪಾರ್ಶ್ವನಾಥರು ಬೋಧಿಸಿದ್ದ ಧರ್ಮವೇ ಅದು. ಅದನ್ನು ಮಹಾವೀರರು ಇನ್ನಷ್ಟು ಎಳೆ ಎಳೆಯಾಗಿ ಬಿಡಿಸಿ ಪ್ರಚುರಪಡಿಸಿದರು. ಆ ಧರ್ಮದ ಯಥಾರ್ಥತೆಯನ್ನು ಮನಗಾಣಲಿಕ್ಕೆ ಅಂಥ ದೀರ್ಘ, ಕ್ಲಿಷ್ಟ ತಪೋಜೀವನ ಅವರಿಗೆ ಅಗತ್ಯವಾಗಿತ್ತು

ಹೀಗೆ ತಾವು ಕಂಡ ದರ್ಶನವನ್ನು ಪ್ರಚುರಪಡಿಸುತ್ತಾ ಸಾಮಾನ್ಯ ಜನರ ಹಾಗೂ ಆಡಳಿತಗಾರರ ಬದುಕಿನಲ್ಲಿ ಪರಿವರ್ತನೆಗಾಗಿ ಶ್ರಮಿಸುತ್ತಾ, ಅನೇಕ ದೃಷ್ಟಿಕೋನವನ್ನು

ಪ್ರತಿಪಾದಿಸುತ್ತಾ ಸಂಚರಿಸಿದ ಮಹಾವೀರರ ಆಯಸ್ಸೂ ಸಹ ತೀರುವ ಕಾಲ ಬಂದಿತು. ಆತ್ಮನಿಗೆ ಹುಟ್ಟುಸಾವುಗಳಿಲ್ಲ ನಿಜ, ಆದರೆ ಅದು ಧರಿಸಿದ ದೇಹಕ್ಕಂತೂ ಅವೆರಡೂ ಇರಲೇಬೇಕಲ್ಲ!

ತನ್ನ ಎಪ್ಪತ್ತೆರಡನೆಯ ವರ್ಷದಲ್ಲಿ, ಇಂದಿನ ನಲಂದಕ್ಕಿಂತ ತುಸು ಹಿಂದೆಯೇ ಸಿಗುವ ಪಾವಾಪುರಿ ಎಂಬ ಊರಿನಲ್ಲಿ ಆ ವರ್ಷದ ಮಳೆಗಾಲದ ಚಾತುರ್ಮಾಸವನ್ನು ಆಚರಿಸುತ್ತಿದ್ದಾಗ ಮಹಾವೀರರಿಗೆ ತಮ್ಮ ಇಹಜೀವನದ ಅಂತಿಮ ಕ್ಷಣಗಳು ಸಮೀಪಿಸುತ್ತಿರುವುದು ಗೋಚರವಾಯಿತು.(ಯೋಗಿಗಳ ಬದುಕಿನಲ್ಲಿ ಅಂಥ ಅರಿವಾಗುವುದು ತೀರ ಸಹಜ. ನಮ್ಮ ವಿವೇಕಾನಂದರಿಗೂ ಅದು ತಿಳಿದಿತ್ತು) ಅದು ಕ್ರಿ.ಪೂ. ೫೨೭ನೆಯ ವರ್ಷದ ಕಾರ್ತಿಕ ಮಾಸದ ಕೃಷ್ಣ ಪಕ್ಷದ ಚತುರ್ದಶಿಯ ದಿನ. ಲಿಚ್ಛವಿ ಸಮುದಾಯದ ಒಂಭತ್ತು ಮಂದಿ ರಾಜರುಗಳು, ಅವರ ಅನುವರ್ತಿಗಳು, ಸಹಸ್ರಾರು ಜನಸಾಮಾನ್ಯರು ಇವರನ್ನೆಲ್ಲ ಉಪದೇಶಿಸಿ ಮಹಾವೀರರು ತಮ್ಮ ಕೊನೆಯ ಉಪದೇಶವನ್ನು ನೀಡಿದರು–

'ಭವ್ಯ ಜೀವಿಗಳೇ– 'ಧರ್ಮ'ವೆಂಬುದು ಕೇವಲ ಕೇಳುವುದಕ್ಕಲ್ಲ, ಅದು ಆಚರಣೆಯ ಮಾರ್ಗ. ಜಗತ್ತಿನ ಎಲ್ಲ ಜೀವಿಗಳೊಡನೆ ದಯಾಭಾವದಿಂದ ವರ್ತಿಸಿರಿ. ದಯೆಯೇ ಧರ್ಮದ ಮೂಲ. ಅಹಿಂಸೆಯೇ ಪರಮಧರ್ಮ. ನಿಮ್ಮ ನಡತೆಯಿಂದ ನಿಮ್ಮ ಜೀವನವನ್ನು ನೀವು ರೂಪಿಸಿಕೊಳ್ಳಬಲ್ಲಿರಿ.ಎಲ್ಲರಿಗೂ ಪರಮಾತ್ಮನಾಗುವ ಯೋಗ್ಯತೆಯಿದೆ. ಅದನ್ನು ಕಂಡುಕೊಂಡು ಬಾಳಿರಿ. ಆತ್ಮ ಸ್ವಾತಂತ್ರ್ಯವನ್ನು ಸಂಪಾದಿಸಿರಿ'– ಇದು ಅವರ ಅಂತಿಮ ಉಪದೇಶದ ಸಾರ. ಇದು ಮಹಾವೀರರು ಸಾಕ್ಷಾತ್ಕರಿಸಿಕೊಂಡ ಸತ್ಯ; ಅವರು ಬದುಕಿದ ದಾರಿ.

ಈ ಅಂತಿಮ ಪ್ರವಚನವಾದ ಬಳಿಕ ಆತ್ಮಧ್ಯಾನದಲ್ಲಿ ಲೀನರಾದ ಮಹಾವೀರಸ್ವಾಮಿಯು ಕೆಲವು ಘಳಿಗೆಗಳ ಬಳಿಕ ಅದೇ ಚತುರ್ದಶಿಯ ಮಧ್ಯರಾತ್ರಿಯ ಹೊತ್ತಿಗೆ ಧ್ಯಾನಸ್ಥ ಸ್ಥಿತಿಯಲ್ಲಿಯೇ ತಮ್ಮ ಭೌತಿಕ ಶರೀರವನ್ನು ತ್ಯಜಿಸಿ ಮೋಕ್ಷಗಾಮಿಯಾದರು. ದಿವ್ಯ ಪ್ರಭೆಯಿಂದ ಕೂಡಿದ ಆ ಶರೀರದಿಂದ ಆತ್ಮವು ನಿರ್ಗಮಿಸುತ್ತಿದ್ದಂತೆ ಆಗ ಅಲ್ಲಿ ಕತ್ತಲೆ ವ್ಯಾಪಿಸಿತು. ಅದನ್ನು ತೊಲಗಿಸಲು ಆಗ ಅಲ್ಲಿದ್ದ ಸಹಸ್ರಾರ್ಯ ಜನ ಶ್ರಾವಕರು ದೀಪಗಳನ್ನು ಬೆಳಗಿಸಿದರು. ಅದೇ 'ದೀಪಾವಲೀ' ಎನ್ನಿಸಿಕೊಂಡಿತು. ಜೈನರಲ್ಲಿ ದೀಪಾವಳಿಗಿರುವ ಅರ್ಥ ಇದು. ಮಹಾವೀರ ಸ್ವಾಮಿಯ ಮೋಕ್ಷ ಕಲ್ಯಾಣದ ಆಚರಣೆ.

ಮಹಾವೀರರು ನಿರ್ವಾಣ ಹೊಂದಿದ ಪಾವಾಪುರಿ ನಗರದ ಆ ಸ್ಥಳದಲ್ಲಿ ಅನಂತರ ಒಂದು ಪುಟ್ಟ ಮಂದಿರವನ್ನೂ ಅದರ ಸುತ್ತಲೂ ಒಂದು ಕೆರೆಯನ್ನೂ (ಸೌಂದರ್ಯಕ್ಕಾಗಿ) ನಿರ್ಮಿಸಲಾಯಿತು. ದಂಡೆಯಿಂದ ಆ ಮಂದಿರಕ್ಕೆ ಸೇತುವೆ ನಿರ್ಮಾಣವಾಯಿತು. ಅದನ್ನು 'ಜಲಮಂದಿರ' ಎನ್ನುತ್ತಾರೆ. ಪಾವಾಪುರಿಯಲ್ಲಿನ ಆ ಜಲಮಂದಿರವನ್ನು ನಾವು ಈಗಲೂ ದರ್ಶಿಸಬಹುದು. ಮಹಾವೀರರು ತಮ್ಮ ಭೌತಿಕ ಶರೀರ ತ್ಯಜಿಸಿ ನಿರ್ವಾಣ ಹೊಂದಿದ ಪಾವನ ಸ್ಥಾನವದು.

ಮಹಾವೀರರು ಜಗತ್ತಿನ ಅಹಿಂಸಾಜ್ಯೋತಿ. ಬೌದ್ಧ ಧರ್ಮದಲ್ಲೂ ಅಹಿಂಸೆಯ ಮಹತ್ವವನ್ನು ಸಾರಲಾಗಿದೆ. ಆದರೆ ಅಲ್ಲಿ ಅದರ ವಿವೇಚನೆ ಜೈನಧರ್ಮದಲ್ಲಿರುವಷ್ಟು ಸೂಕ್ಷ್ಮವಾಗಿಲ್ಲ. ಮಹಾವೀರರ ಅಹಿಂಸಾತತ್ವ ವಿವೇಚನೆ ಆನಂತರ ಉಳಿದ ಧರ್ಮಗಳನ್ನೂ ಪ್ರಭಾವಿಸಿತು.

**ಮಹಾವೀರ ವಾಣಿ :**

1. ವಿನಯವು ಮುಕ್ತಿಯ ಬಾಗಿಲು, ವಿನಯದಿಂದ ಸಂಯಮ. ತಪ ಮತ್ತು ಜ್ಞಾನಗಳು ಲಭಿಸುತ್ತವೆ.
2. ಜ್ಞಾನವು ಮಾನವ ಜೀವನದ ಸಾರವಾಗಿದೆ. ಅದರ ಪ್ರಕಾಶವನ್ನು ಯಾರೂ ನಷ್ಟಗೊಳಿಸಲಾರರು.
3. ಲೋಭಿಯ ಆಶೆಗೆ ಅಂತ್ಯವಿಲ್ಲ.
4. ಪರಿಗ್ರಹ ಪರಿಮಿತಿಯಿಂದಲೇ ಜೀವನದಲ್ಲಿ ಸಮಾಧಾನ.
5. ಪ್ರತಿಯೊಬ್ಬನೂ ತಾನು ಮಾಡಿದ ಕರ್ಮಫಲವನ್ನು ಉಣ್ಣಲೇಬೇಕು.
6. ಗುಣವಂತರನ್ನು ಕಂಡು ಸಂತೋಷಪಡು.
7. ಸಮತಾಭಾವ ಉಳ್ಳವನೇ ಶ್ರಮಣ.
8. 'ಶರೀರವೇ ಆತ್ಮ'ನೆಂಬ ತಿಳುವಳಿಕೆಯೇ ಎಲ್ಲ ದುಃಖಗಳಿಗೆ ಕಾರಣ.
9. ಕುಮಾರ್ಗಿಗಳನ್ನು ಹೊಗಳಬೇಡಿ.
10. ಶರೀರ ಸುಖದಲ್ಲಿ ಮಗ್ನನಾದವನು ಧರ್ಮವನ್ನು ತಿಳಿಯಲಾರ

□







# ಮಣ್ಣಿನ ಬಾಹ್ಯ ಬಳಕೆ

–ಜಿ.ವಿ.ವಿ. ಶಾಸ್ತ್ರಿ *

**ಯಾವ ಮಣ್ಣು ?**

**ಕೆರೆಯ ಜೇಡಿಮಣ್ಣು :** ಹಲವು ಕೆರೆಗಳನ್ನು ನುಂಗಿದ ಮೇಲಲ್ಲವೇ ನಗರವಾಗುವುದು. ಒಂದು ವೇಳೆ ಎಲ್ಲೋ ಅಲ್ಲೋ ಇಲ್ಲೋ ಒಂದು ಕೆರೆ ಉಳಿದಿದ್ದರೆ, ಊರಿನ ಸಾರವೆಲ್ಲಾ ಅದರಲ್ಲಿಯೇ! ಈ ಮಣ್ಣು ಈಗ ಸಿಕ್ಕುವ ಸಾಧ್ಯತೆ ಕಡಿಮೆ.

**ಹುತ್ತದ ಮಣ್ಣು :** ಸಿಮೆಂಟಿನ ಕಾಡಿನಲ್ಲಿ ಹುತ್ತವನ್ನು ಎಲ್ಲಿ ಹುಡುಕೋಣ? ಇದೂ ಅಸಾಧ್ಯ?

**ಪಾಯದ ಮಣ್ಣು :** ನಗರದ ಹೊರವಲಯಗಳಲ್ಲಿ ಹೊಸ ಕಟ್ಟಡಗಳಾಗುವ ಜಾಗದಲ್ಲಿ ಇದು ದೊರೆತರೂ ದೊರೆಯಬಹುದು.

ನಮ್ಮ ಆಸುಪಾಸಿನಲ್ಲಿ ಮೇಲಿನ ಮೂರು ತರಹದ ಮಣ್ಣುಗಳಲ್ಲಿ ಯಾವುದಾದರೂ ಒಂದು ತರಹದ್ದಕ್ಕಾಗಿ ಪ್ರಯತ್ನಿಸುವುದು. ಸಿಕ್ಕದಿದ್ದಲ್ಲಿ ಎಲ್ಲಿಂದಲಾದರೂ ತರಿಸಿ ಅದರಲ್ಲಿನ ದಪ್ಪ ಕಲ್ಲುಗಳು ಹಾಗೂ ಇತರೆ ಕಸ ಕಡ್ಡಿಗಳನ್ನು ತೆಗೆದು ಬಿಸಿಲಿನಲ್ಲಿ ಒಣಗಿಸಿ ಒಂದು ಮಡಕೆಯಲ್ಲಿ ಹಾಕಿ ಮಂಚದ ಕೆಳಗಿಟ್ಟುಕೊಳ್ಳುವುದು. ಒಬ್ಬ ಡಾಕ್ಟರ್ ಸದಾ ನಿಮ್ಮೊಡನೆ ಇದ್ದಂತೆ ! ದುಬಾಯ್ ಮುಂತಾದ ದೇಶಗಳಲ್ಲಿ ಬೇರೆಯ ದೇಶಗಳಿಂದ ಮಣ್ಣನ್ನು ತರಿಸಿ ಗಿಡಗಳನ್ನು ಬೆಳೆಯುತ್ತಾರೆ ಅಂತಹದರಲ್ಲಿ ನಾವು ಅಕ್ಕ–ಪಕ್ಕದ ಹಳ್ಳಿಗಳಿಂದ ಮಣ್ಣನ್ನು ತರಿಸಿ ಸಂಗ್ರಹಿಸಿ ಇಟ್ಟುಕೊಳ್ಳುವುದು ಅಷ್ಟೊಂದು ಕಷ್ಟದ ಕೆಲಸವಲ್ಲವೆಂದು ನನ್ನ ಅಭಿಪ್ರಾಯ. ಧರ್ಮಸ್ಥಳದ ಚಿಕಿತ್ಸಾಲಯಕ್ಕೆ ಧಾರವಾಡದಿಂದ ಮಣ್ಣನ್ನು ತರಿಸುತ್ತಾರೆ. ಮನಸ್ಸಿದ್ದಲ್ಲಿ ಮಾರ್ಗ. ಮೇಲಿನ ಮೂರು ರೀತಿಯ ಮಣ್ಣುಗಳು ಒಂದೇ ರೀತಿಯ ಕೆಲಸ ಮಾಡುತ್ತವೆ. ಜೇಡಿಮಣ್ಣು ನೀರನ್ನು ಬಹಳ ಹೊತ್ತು ಹಿಡಿದಿಡಬಲ್ಲದು. ಹುತ್ತದ ಮಣ್ಣು ಬಿಳಿಯ ಇರುವೆಗಳ ಬಾಯಿನ ಜೊಲ್ಲಿನಿಂದ ಬಂದಿರುವುದರಿಂದ 'ಆ್ಯಂಟಿ ಸೆಪ್ಟಿಕ್'. ಇವೆರಡೂ ಸಿಕ್ಕದಿದ್ದರೆ ಪಾಯದ ಕೆಳಗಡೆಯ ಮಣ್ಣು. ಒಟ್ಟಿನಲ್ಲಿ ಮಣ್ಣು ಶುದ್ಧವಿರಬೇಕು.

**ಉಪಯೋಗ ಹೇಗೆ ? :** ಮಣ್ಣನ್ನು ಮೃತ್ತಿಕಾ ಸ್ನಾನ, ಮಣ್ಣಿನ ಪಟ್ಟಿ ಇತ್ಯಾದಿಗಳಲ್ಲಿ ಉಪಯೋಗಿಸಬಹುದು.

**ಮೃತ್ತಿಕಾ ಸ್ನಾನ :** ಮೇಲೆ ಹೇಳಿದ ಮೂರು ರೀತಿಯ ಮಣ್ಣುಗಳಲ್ಲಿ ಯಾವುದಾದರೂ ಒಂದು ರೀತಿಯ ಮಣ್ಣನ್ನು ತೆಗೆದುಕೊಂಡು ಇಪ್ಪತ್ತನಾಲ್ಕು ಗಂಟೆಗಳ ಕಾಲ ತಣ್ಣೀರಿನಲ್ಲಿ ನೆನೆಸಿಡಬೇಕು. ಅದನ್ನು ತೀರಾ ನೀರಾಗಿಯೂ ಅಲ್ಲದ, ತೀರ ಗಟ್ಟಿಯಾಗಿಯೂ ಅಲ್ಲದ ಹದಕ್ಕೆ ಕಲಸಿಟ್ಟುಕೊಂಡು ಪಾದದಿಂದ ಪ್ರಾರಂಭಿಸಿ ತಲೆಯವರೆವಿಗೂ ಒಂದಿಂಚು ದಪ್ಪ ಬಳಿದುಕೊಳ್ಳಬೇಕು. ಸಾಧ್ಯವಾದಷ್ಟೂ ಕಡಿಮೆ ವಸ್ತ್ರ ಮೈಮೇಲಿರಬೇಕು. ನೀವು ನಿಮ್ಮದೇ ಪ್ರತಿಮೆಯಂತೆ ಕಾಣುವಿರಿ! ಈ ಸ್ಥಿತಿಯಲ್ಲಿ ಬೆಳಗಿನ ಬಿಸಿಲಿನಲ್ಲಿ ಒಂದು ಗಂಟೆಯ ಕಾಲ ಇರಬೇಕು. ನಂತರ ತಣ್ಣೀರಿನ ಸ್ನಾನ. ಶರೀರದ ಉಷ್ಣತೆ ಕಡಿಮೆಯಾಗುತ್ತದೆ. ಚರ್ಮದ ಕಾಯಿಲೆಗಳು, ಬುದ್ಧಿ ಮಾಂಧ್ಯತೆ ಮುಂತಾದ ಕಾಯಿಲೆಗಳಲ್ಲಿ ಉಪಯೋಗಕ್ಕೆ ಬರುತ್ತದೆ. ಹಳೆಯ ಕಾಯಿಲೆಯಿರುವವರು ವಾರಕ್ಕೊಮ್ಮೆ ಮೃತ್ತಿಕಾ ಸ್ನಾನ ಮಾಡುವುದು ಉತ್ತಮ. ಹಿಂದೆ ಜಟ್ಟಿಗಳು ಮಟ್ಟಿಯ ಮಣ್ಣಿನಲ್ಲಿ 'ಮಣ್ಣಿನ ಸ್ನಾನ' ಮಾಡುತ್ತಿದ್ದರು. ಆ ಮಣ್ಣಿಗೆ ಅನೇಕ ಮೂಲಿಕೆಗಳ ಪುಡಿಯನ್ನು ಹಾಕುತ್ತಾರೆ. ಮೂಲಿಕೆಗಳು ಗೊತ್ತಿಲ್ಲದಿದ್ದರೆ ಹಾಕಲೇಬೇಕೆಂಬ ನಿರ್ಬಂಧವಿಲ್ಲ. ಅಲ್ಲಿ ಮುಖ್ಯವಾದ ವಸ್ತು ಮಣ್ಣು. ಗೊತ್ತಿದ್ದಲ್ಲಿ ಮೂಲಿಕೆಗಳನ್ನೂ ಬಳಸಿ, ತಪ್ಪಿಲ್ಲ. ಗೊತ್ತಿಲ್ಲದಿದ್ದಲ್ಲಿ ದುಃಖ ಬೇಡ, ಮಣ್ಣಿಗೇ ಆ ಶಕ್ತಿ ಇದೆ.

* 'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.

**ಮಣ್ಣಿನ ಪಟ್ಟಿ :**

ಮೇಲಿನಂತೆಯೇ ಮೂರರಲ್ಲಿ ಯಾವುದಾದರೂ ಒಂದು ರೀತಿಯ ಮಣ್ಣನ್ನು ಹಿಂದಿನದಕ್ಕಿಂತ ಕೊಂಚ ಗಟ್ಟಿಯಾಗಿ ಕಲೆಸಿಕೊಂಡು ೬" ಅಗಲ X ೩೦" ಉದ್ದ ಇರುವ ಹತ್ತಿಯ ಬಟ್ಟೆಯನ್ನು ತೆಗೆದುಕೊಂಡು, ಮಧ್ಯದಲ್ಲಿ ೪" ಅಗಲ X ೬" ಉದ್ದ X ೧" ದಪ್ಪ, (ಅವರವರ ಹೊಟ್ಟೆಯ ಅಳತೆಗೆ ತಕ್ಕಂತೆ). ಮಣ್ಣನ್ನು ರೊಟ್ಟಿಯಂತೆ ತಟ್ಟಬೇಕು. ಇದನ್ನು ಹೊಟ್ಟೆಯ ಮೇಲಿಟ್ಟು ಸೊಂಟದ ಸುತ್ತಾ ಬಟ್ಟೆಯನ್ನು ಕಟ್ಟಿ ಕಡೆಗೆ ಪಿನ್ ಮಾಡಬೇಕು. ಇದರ ಮೇಲೆ ಅದೇ ಅಳತೆಯ ಮತ್ತೊಂದು ಹತ್ತಿಯ ಬಟ್ಟೆಯನ್ನೂ ಕಟ್ಟಬೇಕು. ಮಣ್ಣು ಹೊಟ್ಟೆಗೆ ತಾಗುವಂತಿರಬೇಕು. ಚರ್ಮಕ್ಕೆ ತಾಗುವಂತೆ ಹಾಕುವುದರಿಂದ ಮುಚ್ಚಿದ್ದ ರೋಮ ರಂಧ್ರಗಳನ್ನು ತೇವದ ಮಣ್ಣು ತೆರೆದು ಅದರ ಮುಖಾಂತರ ವಿಷವಸ್ತುಗಳನ್ನು ಹೀರುತ್ತದೆ. ಬರೀ ಹತ್ತಿಯ ಬಟ್ಟೆಯನ್ನು ಮಾತ್ರ ಸುತ್ತುವುದರಿಂದ ಶರೀರದ ಶಾಖ ಕಡಿಮೆಯಾಗುತ್ತದೆ. ರಾತ್ರಿಯ ಊಟವನ್ನು ೭ ಗಂಟೆಗೆ ಮುಗಿಸಿ ರಾತ್ರಿ ಹತ್ತು ಗಂಟೆಯ ಮೇಲೆ ಈ ಪಟ್ಟಿಯನ್ನು ಹಾಕಿಕೊಂಡು ಮಲಗುವುದು. ಮಧ್ಯದಲ್ಲಿ ಎಚ್ಚರವಾದರೆ ಮಣ್ಣಿನ ಪಟ್ಟಿಯನ್ನು ತೆಗೆದುಹಾಕಬಹುದು. ಇಲ್ಲದಿದ್ದರೆ ಬೆಳಿಗ್ಗೆ ಎದ್ದ ನಂತರ ತೆಗೆಯಬಹುದು. ಈ ರೀತಿ ರಾತ್ರಿಯಲ್ಲಿ ಹಾಕುವ ಉದ್ದೇಶವೇನೆಂದರೆ, ಮಣ್ಣು ಶರೀರದಲ್ಲಿನ ವಿಷವಸ್ತುವನ್ನು ಹೀರುವುದರಿಂದ ಚೆನ್ನಾಗಿ ನಿದ್ದೆ ಬರುತ್ತದೆ, ನಿದ್ದೆ-ರೋಗಹರ.

ವಯಸ್ಸಾದ ಅಥವಾ ಹಳೆಯ ರೋಗಿಗಳಲ್ಲಿ ಶರೀರದ ಉಷ್ಣತೆ ಕಡಿಮೆ ಇರುತ್ತದೆ. ಅಂತಹವರಲ್ಲಿ ತಾತ್ಕಾಲಿಕವಾಗಿ ಶಾಖವನ್ನು ಹೆಚ್ಚಿಸಬೇಕು. ಅಂತಹ ಸಂದರ್ಭದಲ್ಲಿ ಮಣ್ಣು ಪಟ್ಟಿಯ ಮೇಲೆ ಒಂದು ಉಣ್ಣೆಯ ಮಫ್ಲರ್ ಆಗಲಿ, ಅಥವಾ ಹಳೆಯ ರಗ್ಗನ್ನು ೬" ಅಗಲ ೩೦" ಉದ್ದ ಕತ್ತರಿಸಿಕೊಂಡು ಹೊಲಿದು ಇಟ್ಟುಕೊಳ್ಳುವುದು ಉತ್ತಮ. ಇದನ್ನು ಕಟ್ಟಬೇಕು.

ಈ ರೀತಿಯಲ್ಲಿ ಪಟ್ಟಿ ಹಾಕಿಕೊಳ್ಳಲು ಒಬ್ಬರ ಸಹಾಯ ಬೇಕಾಗುತ್ತದೆ. ಮನೆಯಲ್ಲಿ ಒಬ್ಬರೇ ಒಬ್ಬರು. ಆಗ ಏನು ಮಾಡುವುದು? ಅಥವಾ ಕೆಲವು ವಯಸ್ಕರಿಗೆ ಮಧ್ಯರಾತ್ರಿ ಎಚ್ಚರವಾಗುತ್ತದೆ. ಆಗ ಬೇರೊಬ್ಬರ ಸಹಾಯ ಬಯಸುವುದು ಉಚಿತವಲ್ಲ. ಆಗ ಏನು ಮಾಡಬೇಕು?

ಒಂದು ಸ್ಟೆಯನ್‌ಲೆಸ್ ಸ್ಟೀಲ್ ಪಾತ್ರೆಯಲ್ಲಿ ಮಣ್ಣನ್ನು ಕಲಸಿಕೊಂಡು ಕುರ್ಚಿಯಮೇಲೆ ಕುಳಿತುಕೊಂಡು ಒಂದು ದೊಡ್ಡ ಚಮಚದಿಂದ ಹೊಟ್ಟೆಯ ಮೇಲೆ ಹಾಕಿ ಅದರ ಮೇಲೆ ಒಂದು ಬಟ್ಟೆಯನ್ನು ಕಟ್ಟುವುದು. ಹೀಗೆ ಒಬ್ಬರೇ ಮಣ್ಣು ಪಟ್ಟಿಯನ್ನು ಹಾಕಿಕೊಳ್ಳಬಹುದು.

ಹೊಟ್ಟೆಯ ಮೇಲೆ ಮಣ್ಣನ್ನು ಹಾಕಿಕೊಳ್ಳುವುದರಿಂದ ಚೆನ್ನಾಗಿ ತೊಳೆಯಬೇಕು. ಇದೆಲ್ಲಾ ಪಂಚಾಯ್ತಿ. ಹಾಸಿಗೆಯೆಲ್ಲಾ ಮಣ್ಣಾಗುತ್ತದೆ. ಅದಾಗದಂತೆ ಮಣ್ಣುಪಟ್ಟಿ ಹಾಕುವುದು ಹೇಗೆ? ಒಂದು ಅಗಲವಾದ ಚೌಕಾಕಾರದ ಬಟ್ಟೆಯನ್ನು ತೆಗೆದುಕೊಂಡು ಮಧ್ಯದಲ್ಲಿ ಅವರವರ ಹೊಟ್ಟೆಯ ಅಳತೆಗೆ ಅಂದರೆ ಹೊಕ್ಕಳಿನ ಸುತ್ತಲೂ ಬರಬೇಕು ಹಾಗೆ ತೆಳ್ಳಗೆ ಕಲಸಿದ ಮಣ್ಣನ್ನು ಒಂದು ಇಂಚು ದಪ್ಪ ಹರಡುವುದು, ನಾಲ್ಕೂ ಕಡೆ ಅದನ್ನು ಮಡಿಸುವುದು. ಈ ಕೆಲಸವನ್ನು ಟ್ರೇ ಆಗಲಿ ಅಗಲವಾದ ತಟ್ಟೆಯ ಮೇಲಾಗಲೀ ಇಟ್ಟು ತಯಾರಿ ಮಾಡಿಕೊಂಡು ಮಣ್ಣಿನ ಭಾಗವು ಹೊಟ್ಟೆಗೆ ತಾಗುವಂತೆ ಇಟ್ಟುಕೊಳ್ಳುವುದು. ಅದರ ಮೇಲೆ ಒಂದು ಉದ್ದನೆಯ ಬಟ್ಟೆಯನ್ನು ಕಟ್ಟುವುದು. ಇದರಿಂದ ಮೈ, ಕೈ, ಬಟ್ಟೆ ಯಾವುದೂ ಮಣ್ಣಾಗುವುದಿಲ್ಲ.

ಮಣ್ಣು ಅಥವಾ ನೀರಿನ ಉಪಚಾರ ೩೦ ನಿಮಿಷ ಸಾಕೆಂಬುದು ಸಾಮಾನ್ಯ ಅಭಿಪ್ರಾಯ. ಈ ರೀತಿ ಪಟ್ಟಿಯನ್ನು ಹೆಚ್ಚು ಹೊತ್ತು ಹಾಕುವುದರಿಂದ ಯಾವ ರೀತಿಯ ತೊಂದರೆಯೂ ಇಲ್ಲವೇ? ಕೆಲವರ ಪ್ರಶ್ನೆ. ಮಣ್ಣು ಶರೀರದಿಂದ ವಿಷವಸ್ತುವನ್ನು ಹೀರುವುದಾದರೆ ಬಹಳ ಹೊತ್ತು ಬಿಟ್ಟರೆ ಮಣ್ಣಿನಿಂದ ಶರೀರ ಮತ್ತೆ ಅದೇ ವಸ್ತುವನ್ನು ಹೀರುವುದಲ್ಲವೇ? ಇದಕ್ಕೆ ಉತ್ತರ ಈ ರೀತಿ. ತಣ್ಣೀರಿನಿಂದ ಕೂಡಿದ ಮಣ್ಣು ತಂಪಾಗಿರುವರೆವಿಗೂ ವಿಷವಸ್ತುಗಳನ್ನು ಹೀರಲಾರದು. ಆದ್ದರಿಂದ ಮಣ್ಣು ಶರೀರದ ಮೇಲೆ ಹೆಚ್ಚು ಹೊತ್ತು ಉಳಿದರೂ ತೊಂದರೆಯಿಲ್ಲ. ಹಾಗೆ ಬೇಕಿಲ್ಲದವರು ಮುಂದೆ ಹೇಳುವಂತೆ ಪಟ್ಟಿಯನ್ನು ಹಾಕಿಕೊಳ್ಳಬಹುದು.

